# ಚಂದಮಾಮ

ಸಂಸ್ಥಾಪಕರು : ನಾಗಿರೆಡ್ಡಿ
ಸಂಚಾಲಕರು : 'ಚಕ್ರಪಾಣಿ'

ಎಷ್ಟೋ ಜನರು ಬಡವರಾಗಿರುತ್ತಾರೆ. ಕೆಲವರು ಕಷ್ಟಪಟ್ಟು ಶ್ರದ್ಧೆಯಿಂದ ದುಡಿದು ಕ್ರಮೇಣ ಒಳ್ಳೆಯ ಸ್ಥಿತಿಗೆ ಬರುತ್ತಾರೆ. ಅಂಥವರ ಮಕ್ಕಳು ಬೆಳೆಯುವ ಕಾಲದಲ್ಲಿ ಶ್ರಮವರಿಯದ ಶ್ರೀಮಂತರಾಗಿರುತ್ತಾರೆ. ಆಗ ಆ ಮಕ್ಕಳು ಹೇಗೆ ಬೆಳೆಯುತ್ತಾರೆಂಬುದರಲ್ಲಿ ಶ್ರೀಮಂತಿಕೆಗೆ ಬಂದ ಹೆತ್ತವರ ಸಾರ್ಥಕತೆ ಅಡಗಿದೆ. ಅಂತೆಯೇ ತಂದೆ ತಾಯಂದಿರು ಮಕ್ಕಳ ಬೆಳವಣಿಗೆಯಲ್ಲಿ ಎಚ್ಚರವಿರಬೇಕೆಂದೂ, ಮಕ್ಕಳು ಕೂಡ ತಮ್ಮ ಸ್ವಂತ ಯೋಗ್ಯತೆಯನ್ನು ಕಳೆದುಕೊಳ್ಳಬಾರದೆಂದೂ ಈ ಸಂಚಿಕೆಯಲ್ಲಿರುವ "ಸ್ವಂತ ಯೋಗ್ಯತೆ" ಎಂಬ ಕಥೆ ವಿವರಿಸುತ್ತದೆ.

ಸಂಪುಟ: ೫೫ ] ಫೆಬ್ರವರಿ '೭೫ [ ಸಂಚಿಕೆ : ೨






CHITRA



# ಮಿತ್ರಭೇದ

## ೧೯

"ಮೂರನೇದಿನ ಬೆಸ್ತರು ಬಂದು ಮಡುವಿನೊಳಗೆ ಬಲೆಯನ್ನು ಬೀಸಿದರು. ಮೀನುಗಳಿಗೆ ತಪ್ಪಿಸಿಕೊಳ್ಳಲಿಕ್ಕೆ ಸಾಧ್ಯವಾಗಲಿಲ್ಲ. ಮಡುವಿನಲ್ಲಿದ್ದ ಎಲ್ಲಾ ಮೀನುಗಳೂ ಬಲೆಯೊಳಗೆ ಸಿಕ್ಕಿಬಿದ್ದುವು. ಆ ಸಮಯದಲ್ಲಿ ಪ್ರತ್ಯುತ್ಪನ್ನಮತಿ ಮೀನುಮಾತ್ರ ಉಪಾಯ ಮಾಡಿ ತಾನು ಸತ್ತ ಹಾಗೇ ಬಿದ್ದಿತ್ತು. ಅದನ್ನು ನೋಡಿ ಬೆಸ್ತರು 'ಈ ದೊಡ್ಡ ಮೀನು ಸತ್ತಿದೆ. ಇದನ್ನು ಎತ್ತಿ ಬದಿಯಲ್ಲಿಟ್ಟು, ಉಳಿದ ಮೀನುಗಳೆಲ್ಲ ಸತ್ತ ಮೇಲೆ, ಅವುಗಳೊಂದಿಗೆ ಇದನ್ನೂ ಹಾಕಿ ಕೊಂಡೊಯ್ಯಬಹುದು.' ಅಂದುಕೊಂಡರು. ಅದರಂತೆ ಅವರು ಆ ಮೀನನ್ನು ತೆಗೆದು ತೀರದ ಮೇಲೆ ಇಟ್ಟು ಅತ್ತ ತಿರುಗಿದರು. ಆಗ ಆ ಮೀನು ಮೆಲ್ಲಗೆ ನೀರಿನೊಳಗೆ ಜಾರಿಕೊಂಡಿತು. ಯದ್ಭವಿಷ್ಯತಿ ಮೀನುಮಾತ್ರ ಬಲೆಯಲ್ಲಿಯ ಮೀನುಗಳ ಗುಂಪಿನಲ್ಲಿ ಸತ್ತುಹೋಯಿತು. ಹೀಗೆ ಎಲ್ಲಾ ಮೀನುಗಳನ್ನೂ ಬೆಸ್ತರು ಕೊಂಡೊಯ್ದರು."

ತನ್ನ ಹೆಂಡತಿ ಹೇಳಿದ ಮೀನುಗಳ ಕಥೆಯನ್ನು ಕೇಳಿ, ಗಂಡು ಟಿಟ್ಟಿಭ, "ಓಹೋ, ನಾನು ಯದ್ಭವಿಷ್ಯತಿ ಮೀನಿನಂಥವನೆಂದುಕೊಂಡೆಯಾ? ನಾನು ಮುಂದಾಗಿ ಆಲೋಚನೆ ಮಾಡಿ, ನನ್ನ ಉಪಾಯಗಳನ್ನೆಲ್ಲ ಜೋಡಿಸಿಕೊಂಡು ಆ ಮೇಲೆಯೇ ಯಾವ ಕೆಲಸವಾದರೂ ಮಾಡುವವನು" ಎಂದಿತು.

ಗಂಡನ ಮಾತನ್ನು ನಂಬಿ ಹೆಣ್ಣು ಟಿಟ್ಟಿಭ ಸಮುದ್ರದ ಬದಿಯಲ್ಲಿಯೇ ಮೊಟ್ಟೆಗಳನ್ನಿಟ್ಟಿತು. ಈ ಮೊದಲು ಆ ಹಕ್ಕಿಗಳು ತಮ್ಮೊಳಗೆ ಚರ್ಚಿಸಿಕೊಂಡ ಮಾತುಕತೆಗಳನ್ನೆಲ್ಲಾ ಸಮುದ್ರವು ಕೇಳಿಸಿಕೊಂಡಿತ್ತು. ಆಗ ಅದು ತನ್ನೊಳಗೆ, "ಈ ಸಣ್ಣ ಗಂಡು ಹಕ್ಕಿಗೆ ಇಷ್ಟು ಗರ್ವವೆ? ಇದಕ್ಕೆ ಸರಿಯಾದ ಪಾಠ ಕಲಿಸಬೇಕು" ಎಂದುಕೊಂಡು ತಕ್ಕ ಸಮಯವನ್ನು ಕಾಯುತ್ತಿತ್ತು.

ಮಾರನೇದಿನ ಟಿಟ್ಟಿಭ ಪಕ್ಷಿಗಳೆರಡೂ ಆಹಾರ ಹುಡುಕಲು ಹೊರಟುಹೋದುವು. ಆಗ ಸಮುದ್ರವು ದೊಡ್ಡದೊಂದು ತೆರೆಯನ್ನು ಕಳುಹಿಸಿ ಟಿಟ್ಟಿಭದ ಮೊಟ್ಟೆಗಳನ್ನೆಲ್ಲ ತನ್ನೊಳಗೆ ಎಳೆದುಕೊಂಡಿತು. ಪಕ್ಷಿಗಳು ಹಿಂದಿರುಗಿದಾಗ ಒಂದೂ ಮೊಟ್ಟೆಗಳಿರಲಿಲ್ಲ. ಆಗ ಹೆಣ್ಣು ಹಕ್ಕಿ ಗಂಡು ಹಕ್ಕಿಯೊಂದಿಗೆ,

ಹಿಂಬದಿಯ ಚಿತ್ರ ಕಥೆ

"ನಮ್ಮ ಮೊಟ್ಟೆಗಳು ಏನಾದುವೋ ನೋಡು. ನೀನು ಯದ್ಭವಿಷ್ಯತಿ ಮೀನಿನ ಹಾಗೆಯೇ ಕೇಳಿ ಕೇಡನ್ನು ತಂದುಕೊಂಡೆ. ಮಕ್ಕಳನ್ನು ಕಳೆದುಕೊಂಡು ಬದುಕಲು ನನ್ನಿಂದ ಸಾಧ್ಯವಿಲ್ಲ. ಬೆಂಕಿ ಉರಿಸಿ ಅದರಲ್ಲಿ ಬಿದ್ದು ಆತ್ಮಹತ್ಯ ಮಾಡಿಕೊಳ್ಳುತ್ತೇನೆ" ಎಂದಿತು ದುಃಖದಿಂದ.

"ನೀನು ಅವಸರಪಟ್ಟು ಏನಾದರೂ ಮಾಡಿಕೊಂಡುಬಿಡಬೇಡ. ಈ ಸಮುದ್ರವನ್ನು ಒಣಗಿಸಿ ನನ್ನ ಪ್ರತಾಪ ತೋರಿಸುತ್ತೇನೆ" ಎಂದಿತು ಗಂಡು.

"ಬಾಯಿಗೆ ಬಂದ ಹಾಗೆ ಮಾತಾಡಬೇಡ. ಹಾತೆಗಳು ಅಗ್ನಿ ಜ್ವಾಲೆಯೊಂದಿಗೆ ಹೋರಾಡುವ ಹಾಗೇ ಇದೆ ನೀನು ಸಮುದ್ರದೊಂದಿಗೆ ಹೋರಾಡುವುದು" ಎಂದಿತು ಹೆಣ್ಣು ಹಕ್ಕಿ.

"ಹಾಗೆ ಹೇಳಬೇಡ. ನನ್ನ ಕೊಕ್ಕಿನಿಂದ ಸಮುದ್ರದ ನೀರನ್ನೆಲ್ಲಾ ಎಳೆದು ಹಾಕಿ, ಬರೀ ಮರಳು ಮಾತ್ರ ಉಳಿಸುತ್ತೇನೆ ನೋಡು" ಎಂದಿತು ಗಂಡು ಹಕ್ಕಿ.

"ನಿನ್ನ ಕೊಕ್ಕಿನಲ್ಲಿ ಒಂದು ಚುಕ್ಕೆ ನೀರು ಹಿಡಿದೀತು. ಗಂಗಾ ಸಿಂಧೂ ನದಿಗಳಂತಹ ಆರು ಸಾವಿರ ನದಿಗಳೂ, ಎಪ್ಪತ್ತೈದು ಸಾವಿರ ಉಪನದಿಗಳೂ ಬಂದು ಅನುಕ್ಷಣವೂ ಕೂಡಿಕೊಂಡಿರುವ ಸಮುದ್ರವನ್ನು ಹೇಗೆ ಬತ್ತಿಸುವೆ ? ಇಂತಹ ಆಗದ ಹೋಗದ ಪ್ರಯತ್ನಗಳನ್ನು ನೆನೆಯಬೇಡ, ಮಾತಾಡಬೇಡ" ಎಂದಿತು ಹೆಣ್ಣು ಟಿಟ್ಟಿಭ.

"ಏಕೆ ಈ ನಿರುತ್ಸಾಹದ ಮಾತುಗಳು ? ದೃಢ ನಿಶ್ಚಯದಿಂದ, ಮನಸ್ಸನ್ನು ಗಟ್ಟಿಮಾಡಿಕೊಂಡು ಕೆಲಸಕ್ಕಿಳಿದರೆ ಸಾಧಿಸಲಾಗದ ಕೆಲಸವಾವುದೂ ಇಲ್ಲ ಗೊತ್ತೇ ?" ಎಂದಿತು ಗಂಡು.

"ಏನಾದರೂ ನಿನ್ನೊಬ್ಬನಿಂದ ಅದೇನೂ ಆಗದು. ಕಡೇಪಕ್ಷ ಉಳಿದ ಹಕ್ಕಿಗಳ ಸಹಕಾರವನ್ನಾದರೂ ಸಂಪಾದಿಸು. ಒಬ್ಬರಿಂದ ಆಗದ ಕೆಲಸ ಹತ್ತು ಮಂದಿ ಸೇರಿದರೆ ಆಗುವುದುಂಟು. ಒಂದು



ದಾರವು ಮಾತ್ರ ಆನೆಯನ್ನು ಬಂಧಿಸಲಾರದು. ಆದರೆ ನೂರು ಎಳೆ ನಾರುಗಳಿಂದ ಹೆಣೆದ ಹಗ್ಗವಾದರೆ ಆನೆಯನ್ನು ಸುಲಭವಾಗಿ ನಿಗ್ರಹಿಸಬಲ್ಲುದು. ಮರಕುಟಿಗನ ಹಕ್ಕಿಯೂ, ಗುಬ್ಬಚ್ಚಿಯೂ, ಕಪ್ಪೆಯೂ, ಮೇಕೆಯೂ ಒಂದಾಗಿ ಆನೆಯನ್ನು ಮಟ್ಟಮಾಡಿವೆಯಷ್ಟೆ ?" ಎಂದಿತು ಹೆಣ್ಣು ಟಿಟ್ಟಿಭ.

"ಅದೇನು ಸಂಗತಿ ?" ಎಂದು ಗಂಡು ಟಿಟ್ಟಿಭ ಕೇಳಲು, ಹೆಣ್ಣು ಟಿಟ್ಟಿಭ ಹೀಗೆ ಹೇಳಿತು :

### ಗುಬ್ಬಚ್ಚಿ - ಆನೆ

ಒಂದು ದೊಡ್ಡ ಕಾಡಿನಲ್ಲಿ, ದೊಡ್ಡದೊಂದು ಮರದ ಕೊಂಬೆಯ ಮೇಲೆ, ಸುಂದರವಾಗಿ ಗೂಡು ಕಟ್ಟಿಕೊಂಡು ಗುಬ್ಬಿಗಳ ಜತೆಯೊಂದು ವಾಸವಾಗಿತ್ತು. ಹೆಣ್ಣು ಗುಬ್ಬಚ್ಚಿ ಆಗಲೇ ಮೊಟ್ಟೆಗಳನ್ನಿಟ್ಟಿತ್ತು. ಮಾರನೇದಿನ ಒಂದು ಆನೆ ಆ ದಾರಿಯಾಗಿ ನಡೆಯುತ್ತ, ಮಧ್ಯಾಹ್ನದ ಬಿಸಿಲಿಗೆ ತಡೆಯಲಾರದೆ ಆ ಮರದ ನೆರಳಿನಲ್ಲಿ ಸ್ವಲ್ಪ ಹೊತ್ತು

ನಿಂತಿತು. ಸುಮ್ಮನೆ ನಿಂತಿರುವುದನ್ನುಬಿಟ್ಟು ತಂತಿಗಾರ ಬುದ್ಧಿಯಿಂದ. ಸೊಂಡಿಲನ್ನು ಬೀಸಿ ಮರದ ಒಂದು ಕೊಂಬೆಯನ್ನು ಹಿಡಿದೆಳೆದು ಮುರಿಯಿತು. ಆ ಕೊಂಬೆಯ ಮೇಲೆಯೇ ಗುಬ್ಬಿಗಳ ಗೂಡು ಇತ್ತು. ಆ ಗೂಡಿನೊಳಗಿದ್ದ ಮೊಟ್ಟೆಗಳೆಲ್ಲ ಕೆಳಗೆ ಬಿದ್ದು ಒಡೆದುಹೋದುವು. ಅದೃಷ್ಟವಶಾತ್ ಗುಬ್ಬಿಗಳ ಜೋಡಿಮಾತ್ರ ಸಾಯದೆ ತಪ್ಪಿಸಿಕೊಂಡುವು.

ತನ್ನ ಮೊಟ್ಟೆಗಳೆಲ್ಲ ನಾಶವಾದುದನ್ನು ನೋಡಿ ಹೆಣ್ಣು ಗುಬ್ಬಿ ತುಂಬಾ ಶೋಕಿಸಿತು. ಅದರ ಅಳುವಿಕೆಯನ್ನು ಕೇಳಿ ಪಕ್ಕದಲ್ಲಿದ್ದ ಅದರ ಸ್ನೇಹಿತೆಯಾದ ಮರಕುಟಿಗೀ ಹಕ್ಕಿ ಅದರಬಳಿಗೆ ಬಂದು, ಅಳುವಿನ ಕಾರಣವನ್ನು ತಿಳಿದು, "ಹುಚ್ಚಳೀ. ಇನ್ನು ಮೇಲೆ ಎಷ್ಟು ಅತ್ತು ಏನು ಪ್ರಯೋಜನವಿದೆ? ಬುದ್ಧಿವಂತರಾದವರು ಆಗಿ ಹೋದ ವಿಷಯಕ್ಕೆ ಶೋಕಿಸುವುದಿಲ್ಲ. ಸತ್ತುಹೋದವರಿಗಾಗಿ, ಅಳುವುದೆಂದರೆ ಎರಡು ಬಗೆಯ ಬಾಧೆಗಳು. ಸಾಧ್ಯವಾದರೆ ಅವರ ಸಾವಿಗೆ ಕಾರಣರಾದವರ ಮೇಲೆ ಪ್ರತೀಕಾರ ಮಾಡಬೇಕು" ಎಂದಿತು.

ಅದಕ್ಕೆ ಹೆಣ್ಣು ಗುಬ್ಬಿ, "ಅದೇನೋ ನಿಜವೇ. ಆದರೆ ಈ ಹಾಳಾದ ಆನೆ ಕೇವಲ ಪೊಗರಿನಿಂದ ನನ್ನ ಮರಿಗಳ ಪ್ರಾಣ ತೆಗೆಯಿತು. ನೀನು ನಿಜವಾದ ಸ್ನೇಹಿತೆಯಾದರೆ, ಈ ರಕ್ಕಸ ಆನೆಯನ್ನು ಕೊಲ್ಲುವ ಉಪಾಯ ಆಲೋಚಿಸು ನೋಡುವಾ" ಎಂದಿತು.

"ನಮಗೆ ಆಪತ್ತುಬರುವಾಗ ಆನಿಸಿಕೊಳ್ಳುವವನೇ ನಿಜವಾದ ಮಿತ್ರ. ಬೇಕಾದ್ದೆಲ್ಲಾ ಇರುವಾಗ ಎಲ್ಲರೂ ಮಿತ್ರರಾಗಿರುತ್ತಾರೆ. ಕಷ್ಟಕಾಲ ಬಂದಾಗ ಸಹಾಯಕ್ಕೆ ನಿಲ್ಲುವವನೇ ನಿಜವಾದ ಸ್ನೇಹಿತ. ಆಹಾರ ನೀಡುವವನೇ ತಂದೆ. ನಂಬಿದವನೇ ಗೆಳೆಯ. ಸುಖಪಡಿಸುವವಳೇ ಹೆಂಡತಿ. ವೀಣಾರವಳೆಂಬ ನನ್ನ ಸ್ನೇಹಿತೆ ತುಂಬಿಯೊಬ್ಬಳಿದ್ದಾಳೆ. ಅವಳನ್ನು ಕರೆತರುತ್ತೇನೆ. ಆನೆಯನ್ನು ಕೊಲ್ಲುವ ಉಪಾಯ ಅವಳು ಹೇಳುತ್ತಾಳೆ." ಎಂದಿತು ಮರಕುಟಿಗೀ ಹಕ್ಕಿ.

ಅದು ಗುಬ್ಬಚ್ಚಿಯನ್ನು ಕರೆದುಕೊಂಡು ತುಂಬಿಯ ಬಳಿಗೆ ಹೋಗಿ, ಆನೆಯಿಂದ ಗುಬ್ಬಚ್ಚಿಗೆ ನಡೆದ ಅನ್ಯಾಯವನ್ನು ಹೇಳಿ, "ಆನೆಯನ್ನು ಕೊಲ್ಲುವ ಉಪಾಯವನ್ನು ನೀನು ಹೇಳಬೇಕು" ಎಂದಿತು.

"ಅಯ್ಯೋ ಪಾಪ! ಇವಳಿಗೆ ಇಷ್ಟು ದೊಡ್ಡ ದುಃಖ ಬಂದಿತೆ? ಮೇಘದೂತನೆಂಬ ಕಪ್ಪೆ ನನ್ನ ಸ್ನೇಹಿತನಾಗಿದ್ದಾನೆ. ಅವನೊಂದಿಗೆ ಕೂಡಾ ಆಲೋಚನೆ ಮಾಡುವಾ. ಶ್ರೇಯೋಭಿಲಾಷಿಗಳನ್ನೂ, ಸಜ್ಜನರನ್ನೂ, ರಾಜನೀತಿ ತಿಳಿದವರನ್ನೂ, ವಿಜ್ಞಾನಿಗಳನ್ನೂ ಕಲೆತು ಆಲೋಚಿಸಿ ಮಾಡಿದ ಕೆಲಸವು ಸಫಲವಾಗುವುದೆಂದು ಹಿರಿಯರು ಹೇಳುತ್ತಾರೆ" ಎಂದಿತು ತುಂಬಿ.





# ಕಾರಣ ಯಾರು?

ಅಚಲ ಛಲಗಾರನಾದ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುತಿದ್ದ ಶವವನ್ನು ಕೆಳಗಿಳಿಸಿ, ತನ್ನ ಭುಜದ ಮೇಲೆ ಹಾಕಿಕೊಂಡು, ಮೌನವಾಗಿ ಮತ್ತೆ ಸ್ಮಶಾನದ ಕಡೆಗೆ ನಡೆಯುತ್ತಿರಲು, ಶವದೊಳಗೆ ಸೇರಿಕೊಂಡಿದ್ದ ಬೇತಾಳವು ಮಾತಾಡ ತೊಡಗಿತು: "ಎಲೈ ಮಹಾರಾಜನೆ, ನೀನು ಎಷ್ಟುಸಾರಿ ತಪ್ಪಿಸಿಕೊಂಡು ಹೋದರೂ ಕಟ್ಟಕಡೆಗೆ ವಿಧಿಯ ನಿರ್ಣಯದಂತೆಯೇ ನಡೆಯುತ್ತದೆ. ಇದಕ್ಕೆ ನಿದರ್ಶನವಾಗಿ ದೃಢೋದ್ಯಮನ ವಿಚಿತ್ರ ಕಥೆ ನೆನಪಾಗುತ್ತದೆ. ಅದನ್ನು ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕೇಳುತ್ತಾ ನಡೆ" ಎಂದು ಹೀಗೆ ಕಥೆಯನ್ನು ಪ್ರಾರಂಭ ಮಾಡಿತು:

ಕೆಲವು ವರ್ಷಗಳ ಹಿಂದೆ ಸಿಂಧುನದಿಯ ತೀರದಲ್ಲಿ ಬ್ರಹ್ಮಸ್ಥಲೀ ಎಂದೊಂದು ಗ್ರಾಮವಿತ್ತು. ಅಲ್ಲಿ ವೇದಶರ್ಮನೆಂಬ ಪಂಡಿತ ಬ್ರಾಹ್ಮಣನಿದ್ದ. ಅವನಿಗೆ ನಾಲ್ಕು ವೇದಗಳೂ ಬಾಯಿ ಪಾಠವಾಗಿದ್ದುವು. ಆತನ ಬಳಿಯಲ್ಲಿ ಒಬ್ಬ ಶಿಷ್ಯನಿದ್ದ. ಅವನು ವೇದಾಧ್ಯಯನದಲ್ಲಿ ಅತ್ಯಂತ ಶ್ರದ್ಧೆ ವಹಿಸಿ,

## ಬೇತಾಳ ಕಥೆಗಳು?..



ಶ್ರಮಗಳನ್ನು ಸಹಿಸಿ ಕಲಿಯುತ್ತ ದೃಢೋದ್ಯಮನೆಂಬಹೆಸರನ್ನೇ ಸಂಪಾದಿಸಿದನು. ಈ ದೃಢೋದ್ಯಮನ ಅನ್ನ ಬಟ್ಟೆ ಮೊದಲಾದ ಖರ್ಚುಗಳನ್ನು ತುಂಬಿ ಕೊಡುತ್ತಿದ್ದವನು ತಮೋಭೇದಕನೆಂಬ ಗೃಹಸ್ಥ. ಭಿನ್ನತಮಸನೆಂಬವನು ದೃಢೋದ್ಯಮನ ವಾಸಕ್ಕೆ ತನ್ನ ಮನೆಯಲ್ಲಿ ಸ್ಥಳ ಕೊಟ್ಟಿದ್ದನು. ಈ ವಿಧವಾಗಿ ದೃಢೋದ್ಯಮನು ಹತ್ತು ವರ್ಷಗಳಲ್ಲಿ ನಾಲ್ಕು ವೇದಗಳನ್ನೂ ಕಲಿತು ನುರಿತವನಾದನು.

ಒಂದುದಿನ ರಾತ್ರಿ ಭಿನ್ನತಮಸನು ದೃಢೋದ್ಯಮನೊಂದಿಗೆ ಅದೂ ಇದೂ ಮಾತಾಡುತ್ತ, ತನ್ನ ವಿಷಯ ಹೇಳ ತೊಡಗಿ, "ನೋಡಪ್ಪ. ನನಗೆ ಈ ವಿಶಾಲವಾದ ಮನೆ ಮಾತ್ರವಲ್ಲದೆ ವಿಸ್ತಾರವಾಗಿ ದನಗಳ ಮಂದೆಯೂ, ಎಮ್ಮೆಗಳ ಮಂದೆಯೂ ಇದೆ. ಹೊಲಗದ್ದೆಗಳೂ ಯಥೇಷ್ಟವಿವೆ. ದಾಸದಾಸಿಯರೂ ರಕ್ಷಕರೂ ಅನೇಕರಿದ್ದಾರೆ. ನಾನು ತುಂಬಾ ಪಾಂಡಿತ್ಯವನ್ನು ಸಂಪಾದಿಸಿದ್ದೇನೆ. ಆದರೂ ನಾನು ಹುಟ್ಟು ವ್ಯವಸಾಯಗಾರನಾದುದರಿಂದ ನನ್ನ ಪಾಂಡಿತ್ಯ ಜ್ಞಾನವನ್ನು ತಕ್ಕಂತೆ ಉಪಯೋಗಪಡಿಸಲಾರದೆ ಹೋದೆ. ಈಗ ನನಗೆ ವೃದ್ಧಾಪ್ಯ ಬಂದಿದೆ. ಮಹರ್ಷಿಗಳು ಹೇಳಿದಂತೆ ನನ್ನ ಉಳಿದ ಆಯುಷ್ಯವನ್ನು ತೀರ್ಥಯಾತ್ರೆಗಳಿಗೆ ವಿನಿಯೋಗಿಸಬೇಕೆಂದಿದ್ದೇನೆ. ಮುಕ್ತಿಯನ್ನು ಬಯಸುವವನು ವಾರಾಣಸಿಯ ಸಮೀಪದಲ್ಲಿರುವ ಅವಿಮುಕ್ತ ಕ್ಷೇತ್ರವನ್ನು ಸೇವಿಸಿಕೊಂಡಿರಬೇಕು. ಆದುದರಿಂದ ನನಗಿರುವ ಸರ್ವಸ್ವವನ್ನೂ, ದಾಸದಾಸಿಯರ ಸಹಿತವಾಗಿ ನಿನಗೇ ಕೊಡುತ್ತೇನೆ" ಎಂದನು.

ದೃಢೋದ್ಯಮನು ಅವನ ಕೋರಿಕೆಯನ್ನು ಸ್ವೀಕರಿಸಲು ಸಂತೋಷವಾಗಿ ಒಪ್ಪಿಕೊಂಡನು. ನಾಳೆಯೇ ತನ್ನ ಗುರುವಿನ ಬಳಿಯಲ್ಲಿಯೂ, ತಮೋಭೇದಕನ ಬಳಿಯಲ್ಲಿಯೂ ಹೇಳಿ, ಅಪ್ಪಣೆ ಪಡೆದುಕೊಂಡು ಬಂದು, ಭಿನ್ನತಮಸನ ಆಸ್ತಿಯನ್ನು ದಾನ ಪಡೆಯುವುದಾಗಿಯೂ ಹೇಳಿದನು.

ಹಾಗೆ ಮರುದಿನ ಹೊರಟುಹೋದ ದೃಢೋದ್ಯಮನು ಎಷ್ಟು ಹೊತ್ತಾದರೂ ಭಿನ್ನತಮಸನ ಬಳಿಗೆ ಬರಲಿಲ್ಲ. ಭಿನ್ನತಮಸನು ಅವನ ದಾರಿ ಕಾಯುತ್ತಲೇ ಇರಲು, ಮಧ್ಯಾಹ್ನವಾಯಿತು. ಕಡೆಗೆ ಭಿನ್ನತಮಸನೇ ಅವನನ್ನು ಹುಡುಕುತ್ತಾ ಹೋದನು. ವೇದಶರ್ಮನ ಮನೆಯಲ್ಲಿ ಅವನಿರಲಿಲ್ಲ. ತಮೋಭೇದಕನ ಮನೆಗೆ ಹೋದಾಗ, ಆ ಮನೆಯ ಮುಂದೆ ಅತ್ತಿತ್ತ ಎಡತಾಕಿಕೊಂಡಿದ್ದ ದೃಢೋದ್ಯಮನನ್ನು ನೋಡಿದನು.

ಭಿನ್ನತಮಸನನ್ನು ನೋಡುತ್ತಲೇ ದೃಢೋದ್ಯಮನು, "ನಾನಿನ್ನೂ ತಮೋಭೇದಕರಿಂದ ಅಪ್ಪಣೆ ಪಡೆದಿಲ್ಲ. ಯಾಕೋ ಮನೆಯವರೆಲ್ಲ ಬಹಳ ಗಡಿಬಿಡಿಯಲ್ಲಿದ್ದಾರೆ. ಯಾರೂ ನನ್ನನ್ನು ಗಮನಿಸಲಿಲ್ಲ. ಕಾರಣ ಗೊತ್ತಾಗಲಿಲ್ಲ." ಎಂದನು.

ಅವನ ಮಾತು ಕೇಳಿ ಭಿನ್ನತಮಸನು ನಕ್ಕು, "ತಮೋಭೇದಕನ ಹೆಂಡತಿ ಪ್ರಸವಿಸಲಿದ್ದಾಳೆ.

ನೋವು ಪ್ರಾರಂಭವಾಗಿದೆ. ಹೆಣ್ಣು ಮಗು ಹುಟ್ಟುತ್ತದೆ. ಆ ಹೆಣ್ಣು ಮಗು ಬೆಳೆದ ಮೇಲೆ ನೀನು ಅವಳನ್ನೇ ಮದುವೆಯಾಗುವಿ. ಅವಳಿಂದ ಕುಲವು ಕೆಡುತ್ತದೆ. ಇದು ನಿಜ, ನಿಜ" ಎಂದು ಹೇಳಿ ಅಲ್ಲಿಂದ ಹೊರಟುಹೋದನು.

ಈ ಮಾತು ಕೇಳಿ ದೃಢೋದ್ಯಮನಿಗೆ ಗಾಬರಿಯಾಯಿತು. ತಮೋಭೇದಕನಿಗೆ ನಿಜವಾಗಿಯೂ ಹೆಣ್ಣು ಮಗುವೇ ಹುಟ್ಟಿದರೆ, ಭಿನ್ನತಮಸನು ಹೇಳಿದ ಉಳಿದ ಎರಡು ವಿಷಯಗಳು ಕೂಡಾ ನಿಜವಾಗುವುದೆಂದು ಅವನಿಗೆ ತೋರಿತು. ಹೀಗೆ ಅವನು ಯೋಚಿಸುತ್ತಿರುವಾಗಲೇ ತಮೋಭೇದಕನು "ಛೀ! ನನ್ನ ಪ್ರಾರಬ್ಧ!" ಎಂದು ಬೇಸರದಿಂದ ಹಣೆ ಹೊಡೆದುಕೊಳ್ಳುತ್ತ ಹೊರಗೆ ಬಂದನು. ಹೆಣ್ಣು ಮಗು ಹುಟ್ಟಿದುದೇ ಅವನ ಬೇಸರಕ್ಕೆ ಕಾರಣವೆಂದು ಕೂಡಲೇ ತಿಳಿಯಿತು. ಭಿನ್ನತಮಸನು ಹೇಳಿದ ಒಂದು ಮಾತು ನಿಜವಾಯಿತು. ಉಳಿದೆರಡು ಮಾತುಗಳನ್ನು ಸುಳ್ಳುಮಾಡಿ, ತಾನು ಆ ಪಾಪಿಷ್ಠ ಹೆಣ್ಣನ್ನು ಮದುವೆಯಾಗದಂತೆ ಎಚ್ಚರದಲ್ಲಿರಬೇಕೆಂದುಕೊಂಡು ಮರುದಿನವೇ ದೃಢೋದ್ಯಮನು ಅಲ್ಲಿಂದ ಹೊರಟನು. ಹತ್ತು ವರ್ಷಗಳವರೆಗೆ ನಾನಾ ದೇಶಗಳನ್ನು ಸಂಚಾರ ಮಾಡುತ್ತ ಕಡೆಗೆ ಗಂಗಾ ತೀರಕ್ಕೆ ಬಂದನು.

ಅಲ್ಲಿ ಒಂದುದಿನ ಅವನು ಬ್ರಾಹ್ಮಣರ ಅಗ್ರಹಾರದಲ್ಲಿರುವ ಒಂದು ಮನೆಯ ಹತ್ತಿರವಿದ್ದ ಒಬ್ಬಳು ಮುದುಕಿಯನ್ನು ನೋಡಿ, "ಅಮ್ಮಾ, ಬಹಳ ದಾಹ; ಸ್ವಲ್ಪ ನೀರು ಕೊಡುವಿರಾ?" ಎಂದು ಕೇಳಿದ.

ಕೂಡಲೇ ಆ ಮುದುಕಿ ಒಳಕ್ಕೆ ಮುಖ ತಿರುಗಿಸಿ. "ಅಮ್ಮಾ, ತಮಾಲಿಕಾ! ಒಂದು ಮಣೆಯನ್ನೂ ಒಂದು ತಂಬಿಗೆ ನೀರನ್ನೂ ತೆಗೆದುಕೊಂಡು ಬಾರೇ ಮಗೂ" ಎಂದು ಕೂಗಿ ಹೇಳಿದಳು. ಸ್ವಲ್ಪ ಹೊತ್ತಿಗೆ ಒಳಗಿನಿಂದ ಹುಡುಗಿಯೊಬ್ಬಳು ಹೊರಗೆ



ಬಂದಳು. ಅವಳು ಕಪ್ಪುವಸ್ತ್ರ ಉಟ್ಟುಕೊಂಡು ಮೆಳ್ಳೆ ಕಣ್ಣುಗಳಿಂದ ನಾಲ್ಕು ದಿಕ್ಕುಗಳನ್ನು ಒಂದೇ ಬಾರಿ ನೋಡುತ್ತ ಕುಂಟಿಕುಂಟಿ ನಡೆಯುತ್ತ, ಒಂದು ಕೈಯಲ್ಲಿ ಮಣೆಯನ್ನೂ, ಇನ್ನೊಂದು ಕೈಯಲ್ಲಿ ನೀರಿನ ತಂಬಿಗೆಯನ್ನೂ ತಂದು, "ಕುಳಿತುಕೊಳ್ಳಿ" ಎನ್ನುತ್ತ ಮಣೆಯನ್ನು ಇಡುವಾಗ, ಇನ್ನೊಂದು ಕೈಜಾರಿ ತಂಬಿಗೆ ಬಿದ್ದು ನೀರು ಚೆಲ್ಲಿಹೋಯಿತು.

"ಏನು ಕೆಲಸ ಮಾಡುವಿ ಹುಡುಗೀ? ಇನ್ನೊಂದು ತಂಬಿಗೆ ನೀರು ತಾ" ಎಂದಳು ಮುದುಕಿ.

ದೃಢೋದ್ಯಮನು ನೀರು ಕುಡಿದು ವಿಶ್ರಾಂತಿಯಾಗಿ ಕುಳಿತಿರುವಾಗ, ಮುದುಕಿ ಅವನನ್ನು ಕುರಿತು, "ಯಾವ ದೇಶದಿಂದ ಬರುವಿಯಪ್ಪ? ಎಲ್ಲಿಗೆ ಹೋಗುತ್ತೀ?" ಎಂದು ಕೇಳಿದಳು.

"ಎಲ್ಲಾ ದೇಶಗಳಿಂದಲೂ ಬರುತ್ತಿದ್ದೇನೆಂದೇ ಹೇಳಬಹುದು. ಯಾವುದಾದರೊಂದು ಬ್ರಾಹ್ಮಣರ ಅಗ್ರಹಾರದಲ್ಲಿ ಸ್ಥಿರಪಟ್ಟು ಮಕ್ಕಳಿಗೆ ಓದು ಹೇಳಿ



ಕೊಡುತ್ತ ಜೀವಿತವನ್ನು ಕಳೆಯಬೇಕೆಂದು ಆಲೋಚಿಸಿದ್ದೇನೆ. ನೋಡಬೇಕು " ಎಂದ ದೃಢೋದ್ಯಮ.

" ಹಾಗಾದರೆ ಇನ್ನು ಯೋಚನೆ ಯಾಕಪ್ಪ ? ಇನ್ನೆಲ್ಲಿಗೂ ಹೋಗುವ ಅಗತ್ಯವಿಲ್ಲ. ಓದುಬರೆಹ ಕಲಿಯಲಿಕ್ಕೆ ನನ್ನ ಇಬ್ಬರು ಮೊಮ್ಮಕ್ಕಳೇ ಇದ್ದಾರೆ. ಅವರಿಗೆ ನೀನು ಬೇಕು, ನಿನಗೆ ಅವರು ಬೇಕು " ಎಂದಳು ಮುದುಕಿ.

ದೃಢೋದ್ಯಮನು ಸರಿ ಎಂದು ಒಪ್ಪಿ, ಆ ಗ್ರಾಮದಲ್ಲಿಯೇ ಉಳಿದನು. ಎರಡು ವರ್ಷ ಆ ಮುದುಕಿಯ ಮೊಮ್ಮಕ್ಕಳಿಬ್ಬರಿಗೂ ಓದುಬರೆಹ ಕಲಿಸಿದನು. ಅಷ್ಟಾಗುವಾಗ ಮುದುಕಿಗೆ ಒಂದು ಆಲೋಚನೆ ಬಂದಿತು. ತಮಾಲಿಕಳಿಗೆ ಮದುವೆಯ ವಯಸ್ಸಾಗಿತ್ತು. ಎಲ್ಲೆಲ್ಲಿಯೋ ಸಂಬಂಧ ಹುಡುಕಿ ಕಷ್ಟಪಡುವುದಕ್ಕಿಂತ, ದೃಢೋದ್ಯಮನಿಗೇ ಕೊಟ್ಟು ನೆಮ್ಮದಿಯಾಗಿ ಕಣ್ಣುಮುಚ್ಚಬಹುದೆಂದು ಅವಳಿಗೆ ತೋರಿತು. ಈ ಸಮಾಚಾರವನ್ನು ಅವಳು ದೃಢೋದ್ಯಮನ ಹತ್ತಿರ ಹೇಳಲು, ಅವನು ಸ್ವಲ್ಪ ಆಲೋಚನೆ ಮಾಡಿ ಈ ಮದುವೆಗೆ ಒಪ್ಪಿಕೊಂಡನು. ಎಲ್ಲೋ ಪಶ್ಚಿಮ ದಿಕ್ಕಿನ ಸಿಂಧೂ ತೀರದ ತಮೋಭೇದಕನ ಮಗಳು ಪಾಪಿಷ್ಠೆಯನ್ನು ಮದುವೆಯಾಗುವ ವಿಧಿ ಈ ಮದುವೆಯಿಂದ ತಪ್ಪಿಸಿಕೊಂಡಂತಾಗುವುದೆಂದು ಅವನಿಗೆ ತೋರಿತು. ಮದುವೆಯೂ ಆಯಿತು.

ಆಮೇಲೆ ಒಂದು ವರ್ಷ ಕಳೆಯಿತು. ಒಂದುದಿನ ಬೆಳಗ್ಗೆ ತಮಾಲಿಕ ಬೇಗನೇ ಎಚ್ಚೆತ್ತಳು. ದೃಢೋದ್ಯಮನಿಗೂ ಎಚ್ಚರವಾಯಿತು. ಆಗ ಅವಳು ಗಂಡನ ಕಾಲು ಹಿಡಿದು ಕಣ್ಣಿಗೊತ್ತಿಕೊಂಡಳು. ಬೇಗ ಎದ್ದುದರಿಂದ ಕೆಲಸಕ್ಕೆ ಇನ್ನೂ ವೇಳೆಯಿತ್ತು. ಅಂತೆಯೇ ಅವಳು ಗಂಡನೊಡನೆ ಮಾತಾಡುತ್ತ, " ನಿಮ್ಮನ್ನು ಪತಿಯಾಗಿ ಪಡೆದುದು ನನ್ನ ಭಾಗ್ಯ " ಎಂದಳು.

" ಹೌದು, ನಿನ್ನ ಹಿರಿಯರು ಯಾರು ? ನಿನಗೆ ಅಜ್ಜಿಯೊಬ್ಬಳೇ ಇರುವಳೇನು ? ನನ್ನ ಹತ್ತಿರ ಓದಿದ ಆ ಹುಡುಗರು ಯಾರು ?" ಎಂದು ಕೇಳಿದ, ಹೊತ್ತು ಕಳೆಯಲಿಕ್ಕಾಗಿ.

ತಮಾಲಿಕ ಒಂದು ನಿಟ್ಟುಸಿರುಬಿಟ್ಟು ತನ್ನ ಚರಿತ್ರೆಯನ್ನು ಹೀಗೆಂದು ಹೇಳಿದಳು : " ಈ ಮುದುಕಿಯ ಗಂಡ ಬಹಳ ಸಂಪನ್ನರಾಗಿದ್ದರು. ದಾನಧರ್ಮಗಳನ್ನು ಚೆನ್ನಾಗಿ ಮಾಡುತ್ತಿದ್ದರು ಅವರಿಗೆ ಒಬ್ಬಳು ಮಗಳಿದ್ದಳು. ಅವಳನ್ನು ತಂದೆ ತನ್ನ ಶಿಷ್ಯನಿಗೇ ಕೊಟ್ಟು ಮದುವೆ ಮಾಡಿದ್ದರು. ಮದುವೆಯಾಗುವುದಕ್ಕೆ ಮೊದಲು ತುಂಬಾ ವಿನಯ. ವಿಧೇಯತೆಗಳಿಂದಿದ್ದ ಆ ಶಿಷ್ಯ ಅಳಿಯನಾದ ಮೇಲೆ ಅತ್ತೆಮಾವಂದಿರ ಮೇಲೆ ಕರ್ಕೋಟಕನ ಹಾಗೆ ಬದಲಾಗಿ ಹೋದ. ಆಮೇಲ ಅವನು ಬಾವಂದಿರೊಂದಿಗೆ ತಕರಾರು ತೆಗೆದು ಸಿಂಧೂ ಪ್ರಾಂತಕ್ಕೆ ಹೊರಟು ಹೋದ. ಅಲ್ಲಿ ಅವನು ಬ್ರಹ್ಮಸ್ಥಲಿ ಎಂಬ ಗ್ರಾಮದಲ್ಲಿ ನಿವಾಸ ಮಾಡಲು ಏರ್ಪಾಡು ಮಾಡಿಕೊಂಡು ವೈದಿಕ ಕರ್ಮಗಳನ್ನು ನಡೆಸಿಕೊಂಡಿದ್ದ.

"ಸ್ವಲ್ಪ ಕಾಲದ ಮೇಲೆ ಅವನಿಗೆ ದುರ್ಭಾಗ್ಯದವಳಾದ ಒಬ್ಬಳು ಮಗಳೂ ಯಮದೂತರಂತಹ ಇಬ್ಬರು ಅವಳಿಜವಳಿ ಮಗಂದಿರೂ ಹುಟ್ಟಿದರು. ಆ ಮಗಳು ನಾನೇ. ನಿಮ್ಮ ಶಿಷ್ಯರಾದ ಆ ಹುಡುಗರು ನನ್ನ ತಮ್ಮಂದಿರು. ತಂದೆ ತಾಯಿಗಳನ್ನು ನೋಡಿದ ನೆನಪೇ ನಮಗಿಲ್ಲ. ನದಿಯಲ್ಲಿ ನೆರೆ ಬಂದು ಸುತ್ತುಮುತ್ತಲಿನ ಗ್ರಾಮಗಳನ್ನೇ ಮುಳುಗಿಸಿ ಹಾಕಿತು. ಆಗ ಸಣ್ಣ ಮಕ್ಕಳಾದ ನಮ್ಮನ್ನು ಯಾರೋ ನಮ್ಮ ಅಜ್ಜಿಯ ಮನೆಗೆ ಸೇರಿಸಿದರು. ಅಜ್ಜಿ ಈ ದೇಶಕ್ಕೆ ಬಂದು ನೆಲೆಸಿದಳು."

ಈ ಕಥೆಯನ್ನು ಕೇಳುವಾಗ ದೃಢೋದ್ಯಮನ ಗುಂಡಿಗೆಗೆ ಬಾಣ ತಗಲಿದಂತಾಯಿತು. ಭಿನ್ನತಮಸನು ಹೇಳಿದ ಎರಡನೇ ಜೋಸ್ಯವು ನಿಜವಾಗಿಬಿಟ್ಟಿತ್ತು. ಹಾಗಾದರೆ ಮೂರನೇಯದು ಖಂಡಿತವಾಗುವುದೇನೋ? ಅದನ್ನಾದರೂ ಸುಳ್ಳು ಮಾಡಲೇಬೇಕೆಂಬ ನಿಶ್ಚಯದಿಂದ, ದೃಢೋದ್ಯಮನು ಯಾರಿಗೂ ಹೇಳದೆ ತೀರ್ಥಯಾತ್ರೆಗೆ ಹೊರಟು ಹೋದನು.

ಹನ್ನೆರಡು ವರ್ಷಗಳ ಅನಂತರ ಕಾಶಿಯ ಬಳಿಗೆ ಬರುತ್ತಿದ್ದಾಗ, ಒಂದುಕಡೆಯಲ್ಲಿ ಒಂದು ದೃಶ್ಯವನ್ನು ನೋಡಿದನು. ಒಬ್ಬ ಮಹಾ ಕಾಪಾಲಿಕನು ತಲೆಬುರುಡೆಗಳ ಮಾಲೆಯನ್ನು ಧರಿಸಿಕೊಂಡು ಮಧುಪಾನ ಮಾಡಿದ ಮತ್ತತೆಯಲ್ಲಿ ತೂರಾಡುತ್ತಾ ನಡೆಯುತ್ತಿದ್ದ. ಅವನ ಹಿಂದೆಯೇ ಕಾಪಾಲಿನಿಯೊಬ್ಬಳು ಅವನ ಹಾಗೆಯೇ ಕುಡಿದು ತಡಬಡುತ್ತಾ ನಡೆಯುತ್ತಿದ್ದಳು. ಹಾವಿನ ಹಾಗೆ ನಡೆಯುತ್ತಿದ್ದ ಅವಳ ಮುಖದಲ್ಲಿ ಮೆಳ್ಳೆಗಣ್ಣುಗಳು ಹೊಳೆಯುತ್ತಿದ್ದುವು.

"ಎಲೇ, ಕಾಪಾಲಿನೀ, ಬೇಗಬಾ. ಅವಿಮುಕ್ತ ಕ್ಷೇತ್ರದಲ್ಲಿ ಧೂಪಕಾಲ ಮೀರಿ ಹೋಗಬಾರದು. ಮಹಾಶಿವನನ್ನು ಅರ್ಚನೆ ಮಾಡಿ, ಹೊಸ ಮದ್ಯ ಸೇವಿಸಬೇಕು." ಎಂದು ಅವಳನ್ನು ಅವಸರ ಪಡಿಸಿದ. ಅಷ್ಟರಲ್ಲಿ ಸಮೀಪ ಬಂದ ದೃಢೋದ್ಯಮನನ್ನು



ನೋಡಿ ಕಾಪಾಲಿನಿ ತನ್ನ ಗಂಡನೆಂದು ಗುರುತು ಹಿಡಿದು, ಅವನ ಕಾಲಿನ ಮೇಲೆ ಬಿದ್ದಳು.

ಇದನ್ನು ನೋಡಿ ಸುತ್ತುಮುತ್ತಲಿನವರೆಲ್ಲ ಓಡಿ ಬಂದರು. ಆಗ ಎಚ್ಚರಕ್ಕೆ ಬಂದ ತಮಾಲಿಕ ತನ್ನ ಗಂಡನನ್ನು ನೋಡಿ, "ಏನು ಮಾಡಿಬಿಟ್ಟಿರಿ! ನಿಮ್ಮ ವೇದಾಧ್ಯಯನ ಏನಾಯಿತು? ನಿತ್ಯಕರ್ಮಾನುಷ್ಠಾನಗಳೆಲ್ಲ ಎಲ್ಲಿ ಹೋದುವು? ನಿಮ್ಮ ಪಿತೃತರ್ಪಣಗಳ ಗತಿ ಏನು? ಓಡಿಹೋಗಿ, ನಾನು ಹಾಳಾಗಿ ಹೋಗುವ ಹಾಗೆ ಮಾಡಿದಿರಿ! ನಿಮಗೆ ಪ್ರಾಯಶ್ಚಿತ್ತವಿದ್ದೀತೇ?" ಎಂದು ನಿಂದಿಸಿದಳು.

ಸುತ್ತಲೂ ಸೇರಿದ ಮಂದಿಯಲ್ಲಿದ್ದ ಬ್ರಾಹ್ಮಣರು ದೃಢೋದ್ಯಮನನ್ನು ಪ್ರಶ್ನೆ ಮಾಡಿ, ತಮಾಲಿಕ ಮಾಡಿದ ಆರೋಪಣೆಗಳು ನಿಜವೆಂದು ತಿಳಿದು, "ಈಗ ನೀನು ಈ ಕಾಪಾಲಿಕನೊಂದಿಗೇ ಇರುವಿಯಾ? ನಿನ್ನ ಗಂಡನೊಂದಿಗೆ ಹೋಗುವಿಯಾ?" ಎಂದು ಅವಳನ್ನು ಕೇಳಿದರು.

ಅವಳು ಗಂಡನ ಬಳಿಗೇ ಹೋಗುವೆನೆಂದಳು. ಆಗ ಬ್ರಾಹ್ಮಣರು ದೃಢೋದ್ಯಮನೊಂದಿಗೆ, "ಇವಳು ಹೀಗೆ ಪತಿತಳಾಗಲು ಕಾರಣನಾದವನು ನೀನೇ. ಇವಳು ಕುಲಭ್ರಷ್ಟಳಾದುದಕ್ಕೆ ನಾವು ತಕ್ಕ ಪ್ರಾಯಶ್ಚಿತ್ತ ಮಾಡಿಸುತ್ತೇವೆ. ನೀನು ಇವಳನ್ನು ಹೆಂಡತಿಯಾಗಿ ಸ್ವೀಕರಿಸಲೇಬೇಕು" ಎಂದರು.

ದೃಢೋದ್ಯಮನು ಹಾಗೆಯೇ ಮಾಡಿ, ತಮಾಲಿಕೆ ಳೊಂದಿಗೆ ಹಿಂದಿನಂತೆಯೇ ಇರತೊಡಗಿದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ದೃಢೋದ್ಯಮನಿಗೆ ಉಂಟಾದ ಅನುಭವಗಳಿಗೆ ಕಾರಣರು ಯಾರು? ವಿಧಿಯೋ? ದೃಢೋದ್ಯಮನ ಪ್ರವರ್ತನೆಯೊ? ಅವನು ಭಿನ್ನತಮಸನು ಹೇಳಿದ ಜೋಸ್ಯವನ್ನು ನಂಬಿದ್ದನೋ ನಂಬಲಿಲ್ಲವೋ? ಈ ಸಂದೇಹಗಳಿಗೆ ತಕ್ಕ ಸಮಾಧಾನ ತಿಳಿದೂ ಹೇಳದಿದ್ದರೆ ನಿನ್ನ ತಲೆಯೊಡೆದು ಸಾವಿರ ಹೋಳುಗಳಾಗುತ್ತದೆ" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ದೃಢೋದ್ಯಮನು ಭಿನ್ನತಮಸನ ಜೋಸ್ಯವನ್ನು ನಂಬಿದುದರಿಂದಲೇ ಅದರಿಂದ ತಪ್ಪಿಸಿಕೊಳ್ಳಲು ನಾನಾ ಯಾತನೆಗಳನ್ನು ಅನುಭವಿಸಿದ. ಅದನ್ನು ನಂಬದವನಾಗಿರುತ್ತಿದ್ದರೆ, ನಿರ್ಲಕ್ಷ್ಯವಾಗಿ ತನ್ನ ಪಾಡಿಗೆ ತಾನು ಜೀವಿತ ಯಾತ್ರೆ ನಡೆಸಿಕೊಂಡಿರುತ್ತಿದ್ದ. ಭಿನ್ನತಮಸನ ಜೋಸ್ಯವು ವಿಧಿಯ ನಿರ್ಣಯಕ್ಕೆ ಸರಿಯಾಗಿಯೇ ಇದ್ದುದರಿಂದ, ವಿಧಿಯ ನಿರ್ಣಯವು ಅದರ ಪಾಡಿಗೆ ನಡೆದೇ ಬಿಟ್ಟಿತು. ಅದು ಕೂಡ ದೃಢೋದ್ಯಮನ ನಿರ್ಣಯದ ಮೂಲಕವಾಗಿಯೇ ನಡೆದುಕೊಂಡು ಹೋಯಿತು. ತಮಾಲಿಕಳನ್ನು ಮದುವೆ ಮಾಡಿಕೊಳ್ಳದೇ ಇರಬೇಕಾಗಿದ್ದರೆ, ಅವನು ಓಡಿಹೋಗುವುದಕ್ಕೆ ಬದಲು ಅವಳಿಗೆ ಸಾಧ್ಯವಾದಷ್ಟು ಸಮೀಪದಲ್ಲೇ ಇರಬೇಕಿತ್ತು. ಮದುವೆಯಾಗಿ ಸಂಸಾರ ನಡೆಸುವಾಗ ಅವಳ ಸಮಾಚಾರ ತಿಳಿಯಲಿಕ್ಕೆ ಹೋದುದು ಕೂಡಾ ಅವನದು ತಪ್ಪು. ಎಲ್ಲಾ ತಿಳಿದ ಮೇಲೆ ಅವನು ಹಾಗೆ ಓಡಿಹೋದುದು ತಪ್ಪೆಂದು ತಮಾಲಿಕ ಹತ್ತು ಮಂದಿಯ ಮುಂದೆ ನಿರೂಪಿಸಿಬಿಟ್ಟಳು. ಗಂಡನಿಂದ ನಿರಾಕರಿಸಲ್ಪಟ್ಟವಳು ಎಂತಹ ಹೀನಗತಿಗೆ ಇಳಿಯುವಳೋ, ಅದಕ್ಕೆ ಅವಳು ಜವಾಬ್ದಾರಳಲ್ಲವೆಂದು, ಕಡೆಗೆ ಅವಳು ಗಂಡನೊಂದಿಗೇ ಇರುವೆನೆಂದು ಹೇಳಿದುದರಿಂದ, ಅವಳು ಪತಿತೆಯಾಗಲು ಅವಳ ದುರ್ಬುದ್ಧಿ ಕಾರಣವಲ್ಲವೆಂದೇ ತಿಳಿಯುತ್ತದೆ. ಆದುದರಿಂದ ಎಲ್ಲವೂ ಅವನ ಸ್ವಯಂಕೃತಾಪರಾಧವೇ"

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.





# ಕಳ್ಳನ ಕಾಣಿಕೆ

ಕಾಶ್ಮೀರ ದೇಶದಲ್ಲಿ ಬಹಳಕಾಲದ ಹಿಂದೆ ಕುಲೀನನಾದ ಪಂಡಿತನೊಬ್ಬನಿದ್ದ. ಆತನದು ಜಮೀನ್ದಾರೀ ವಂಶವಾದುದರಿಂದ, ಆತನ ಮನೆ ಬಹಳ ದೊಡ್ಡದಾಗಿ ಅರಮನೆಯನ್ನು ಹೋಲುತಿತ್ತು. ಈಗ ಆ ಮನೆಯೊಂದರ ಹೊರತು ಜಮೀನಿನ ವರಮಾನವೇನೂ ಇರಲಿಲ್ಲ. ಅವನ ಪೂರ್ವೀಕರು ಸ್ವೇಚ್ಛೆಯಾಗಿ ದುಂದು ಖರ್ಚು ಮಾಡಿ ಅಪಾರವಾಗಿದ್ದ ಆಸ್ತಿಯನ್ನೆಲ್ಲಾ ನಾಶನ ಮಾಡಿಬಿಟ್ಟಿದ್ದರು. ಹೀಗಾಗಿ ಪಂಡಿತನು ಬಹಳ ಬಡತನಕ್ಕೆ ಇಳಿದುಬಿಟ್ಟಿದ್ದನು. ಆದರೆ ತನ್ನ ಹೀನ ಪರಿಸ್ಥಿತಿಯನ್ನು ಇತರರಿಗೆ ತಿಳಿಯಗೊಡದಂತೆ ಮುಚ್ಚಿಟ್ಟುಕೊಂಡು ಬಹಳ ಎಚ್ಚರಿಕೆಯಿಂದ ಮರ್ಯಾದೆಗೆ ಕುಂದು ಬಾರದಂತೆ ಬಹುಕಷ್ಟದಿಂದ ಕಾಲ ಕಳೆಯುತ್ತಿದ್ದ.

ಪಂಡಿತನಿಗೆ ಸುಂದರಿಯಾದ ಮಗಳೊಬ್ಬಳಿದ್ದಳು. ಅವಳನ್ನು ಮದುವೆಯಾಗಲು ಎಷ್ಟೋ ಮಂದಿ ಯುವಕರು ಮುಂದೆ ಬರುತ್ತಿದ್ದರು. ಆದರೆ ಪಂಡಿತನು ಮಗಳಿಗೆ ಮದುವೆ ಮಾಡುವ ಸ್ಥಿತಿಯಲ್ಲಿರಲಿಲ್ಲ. ಅವನು ಅಷ್ಟು ಕಷ್ಟದಲ್ಲಿರುವ ಸಂಗತಿ ಯಾರಿಗೂ ತಿಳಿಯದು. ಅವನ ಹಳೆಯ ಕಾಲದ ದೊಡ್ಡ ಅರಮನೆಯ ಬುಡದಲ್ಲಿ ಅಪಾರ ನಿಧಿ ನಿಕ್ಷೇಪಗಳು ತುಂಬಿವೆಯೆಂದು ಎಲ್ಲರೂ ಹೇಳಿಕೊಳ್ಳುತ್ತಿದ್ದರು.

ಈ ಭ್ರಮೆಯಿಂದಾಗಿಯೇ ಪಂಡಿತನಿಗೆ ಸುಂದರನೆಂಬವನೊಂದಿಗೆ ಹಗೆಯುಂಟಾಯಿತು. ಮೊದಲು ಅವರಿಬ್ಬರೂ ಒಳ್ಳೆಯ ಸ್ನೇಹಿತರಾಗಿದ್ದರು. ಒಂದು ಸಾರಿ ಸುಂದರನು ಪಂಡಿತನ ಹತ್ತಿರ ದೊಡ್ಡ ಮೊತ್ತದ ಸಾಲ ಕೇಳಿದ. ತಾನೇನೂ ಕೊಡುವ ಸ್ಥಿತಿಯಲ್ಲಿಲ್ಲವೆಂದು ಪಂಡಿತನು ಲೌಕಿಕ ಮರ್ಯಾದೆಯಿಂದ ಸೂಕ್ಷ್ಮವಾಗಿ ಹೇಳಿದ. ಆದರಿಂದ ಸುಂದರನು ತನಗೆ ಅವಮಾನವಾಯಿತೆಂದೆಣಿಸಿ, ಪಂಡಿತನ ಮೇಲೆ ಹಗೆ ತೊಟ್ಟವನಾದ.

ಪಂಡಿತನ ಮೇಲೆ ಹಗೆ ತೀರಿಸಿಕೊಳ್ಳಬೇಕೆಂಬ ಉದ್ದೇಶದಿಂದ ಸುಂದರನು ಒಬ್ಬ ದೊಡ್ಡ ಕಳ್ಳನನ್ನು ಕಂಡುಹಿಡಿದು, ಪಂಡಿತನ ಮನೆಯಲ್ಲಿ ಅಪಾರ ಸೊತ್ತು ಅಡಗಿದೆಯೆಂದು ಅವನಿಗೆ ಹೇಳಿ, ಅದನ್ನು ಕದ್ದುಕೊಳ್ಳುವಂತೆ ಪ್ರೇರೇಪಿಸಿದನು. ಕಳ್ಳ ಅದಕ್ಕೆ ಸಂತೋಷದಿಂದ ಒಪ್ಪಿಕೊಂಡು, ಸುಂದರನಿಗೂ ಪಾಲು ಕೊಡುವುದಾಗಿ ಹೇಳಿದನು. ಇದಾವ ಸಂಗತಿಯೂ ತಿಳಿಯದ ಪಂಡಿತನು, ಎಂದಿನಂತೆ

ಕಾಶ್ಮೀರ ಜಾನಪದ ಕಥೆ

ರಾತ್ರಿ ಮಲಗಿ ಯೋಚಿಸಿಕೊಂಡಿದ್ದಾಗ, ಅವನ ಹೆಂಡತಿ, "ಏನೂಂದ್ರೇ, ಸುಮ್ಮನಿದ್ದೀರಲ್ಲಾ? ಹುಡುಗೀಗೆ ಎಷ್ಟೋ ಸಂಬಂಧಗಳು ಬರುತ್ತಿದ್ದರೂ ತಕ್ಕ ವರನನ್ನು ಗೊತ್ತು ಮಾಡದೆ ಯಾಕೆ ಸುಮ್ಮ ನಿದ್ದೀರಿ? ಏನೂ ಹೇಳದೆ ನಿಮ್ಮೊಳಗೇ ಬಾಧೆ ಪಡುತ್ತೀರೇಕೆ?" ಎಂದು ಕೇಳಿದಳು. ತಾವು ಆರ್ಥಿಕ ವಾಗಿ ದರಿದ್ರರಾಗಿದ್ದೇವೆಂಬ ಸಂಗತಿ ಆವಳಿಗೂ ತಿಳಿಯಗೊಟ್ಟಿರಲಿಲ್ಲ ಆ ಪಂಡಿತ.

"ನೀನು ಹೇಳುವುದೆಲ್ಲ ನಿಜವೇ. ಈಗ ಹೇಳು ತ್ತೇನೆ. ಸತ್ಯ ಸಂಗತಿ ಏನಂದರೆ, ನನ್ನ ಹತ್ತಿರ ಹಣ ವೇನೂ ಇಲ್ಲ. ಸ್ವಲ್ಪ ಕಾಲದಿಂದ ನಮ್ಮ ಹಿಂದಿನವರ ಪ್ರತಿಷ್ಠೆಗೆ ಭಂಗ ಬಾರದಂತೆ ಶಕ್ತಿಗೆ ಮೀರಿ ಖರ್ಚು ಮಾಡುತ್ತಾ ಬಂದೆ. ಈಗ ಇರುವ ಪರಿಸ್ಥಿತಿ ಏನೆಂದರೆ ನಮ್ಮ ದಿನ ನಿತ್ಯದ ಸಂಸಾರವು ನಡೆಯಬೇಕಾದರೆ ಎಲ್ಲಿಂದ ಹಣ ತರಬೇಕೆಂಬುದೇ ನನಗೆ ಗೊತ್ತಾಗುವು ದಿಲ್ಲ. ಹುಡುಗಿಯ ಮದುವೆಗೆ ನಾನೇನು ಸಾಯಲಿ?" ಎಂದು ಪಂಡಿತನು ಹೇಳಿಬಿಟ್ಟನು.

"ಅಯ್ಯೋ! ಎಂಥಾ ದುರ್ಗತಿ ಬಂತಲ್ಲಾ ನಮಗೆ! ಅಂಥಾ ಜಮೀನ್ದಾರೀ ವಂಶದಲ್ಲಿ ಇಷ್ಟು ದಾರಿದ್ರ್ಯ ಬಂತೇ ನಮ್ಮ ಕಾಲದಲ್ಲಿ?" ಎಂದು ಪಂಡಿತನ ಹೆಂಡತಿ ಅಳಲಾರಂಭಿಸಿದಳು. ಪಂಡಿತ ನಿಗೂ ದುಃಖ ತಡೆಯಲಾಗಲಿಲ್ಲ.

ಈ ಗಂಡ ಹೆಂಡಿರ ಸಂಭಾಷಣೆಗಳನ್ನೆಲ್ಲಾ, ಒಳಗೆ ಬಂದಿದ್ದ ಕಳ್ಳ ಕೇಳಿಸಿಕೊಂಡ. ಪಂಡಿತನ ಮನೆಯಲ್ಲಿ ಕಳ್ಳತನ ಮಾಡಲು ಅವನು ಬಂದಿದ್ದನು. ತನ್ನ ಹತ್ತಿರ ಸುಳ್ಳು ಹೇಳಿ ಇಲ್ಲಿಗೆ ಕಳುಹಿಸಿದ ಸುಂದರನ ಮೇಲೆ ಅವನಿಗೆ ಬಹಳ ಸಿಟ್ಟು ಬಂತು. ಪಂಡಿತನೂ, ಅವನ ಹೆಂಡತಿಯೂ ನಿದ್ದೆ ಮಾಡುವವರೆಗೂ ಕಳ್ಳನು ಕಾದಿದ್ದು, ಆಮೇಲೆ ಮೆಲ್ಲಗೆ ಹೊರಗೆ ಜಾರಿಕೊಂಡನು.

ಮರುದಿನ ಬೆಳಿಗ್ಗೆ ಸುಂದರನು ಆ ಕಳ್ಳನ ದಾರಿ ಯನ್ನು ನೋಡಿಕೊಂಡಿದ್ದ. ಅವನು ಬರಲೇ ಇಲ್ಲ. ಸ್ವಲ್ಪ ಹೊತ್ತಿನಲ್ಲಿ ಅವನ ಮನೆಯೊಳಗೇ ಯಾರೋ ಕೊಳ್ಳೆ ಹೊಡೆದಿದ್ದಾರೆಂಬ ಸಂಗತಿ ಗೊತ್ತಾಯಿತು. ಮನೆಯೊಳಗೆ ನೋಡಿದರೆ ಒಂದೇ ಒಂದು ಆಭರಣ ಕೂಡಾ ಇಲ್ಲದಂತೆ ಯಾರೋ ಎಲ್ಲಾ ಬಳಿದು ಕೊಂಡು ಹೋಗಿದ್ದರು.

ಮರುದಿನ ಬೆಳಿಗ್ಗೆ ಪಂಡಿತನ ಮನೆಯಲ್ಲಿ ಅವನ ಹೆಂಡತಿ ನಿದ್ದೆಯಿಂದೇಳುವಾಗ, ಅವಳ ತಲೆಯ ಬದಿ ಯಲ್ಲಿ ಒಂದು ಮೂಟೆಯಿರುವುದನ್ನು ನೋಡಿದಳು. ಬಿಡಿಸಿ ನೋಡಿದಾಗ ಅದರೊಳಗೆ ತುಂಬಾ ನಗಗಳೂ ನಾಣ್ಯಗಳೂ ಇದ್ದುವು. ಒಂದು ಕಾಗದದ ಚೂರು ಕೂಡಾ ಇತ್ತು. ಆ ಕಾಗದದಲ್ಲಿ "ನಿಮ್ಮ ಮಗಳ ಮದುವೆಗೆ ಕಳ್ಳನೊಬ್ಬನು ಸಮರ್ಪಿಸಿದ ಚಿಕ್ಕ ಕಾಣಿಕೆ ಯಿದು" ಎಂದು ಬರೆದಿದ್ದಿತು.



# ಲೌಕಿಕ ಜ್ಞಾನವಿಲ್ಲದ ಜೋಯಿಸ

ಒಂದು ದಿನ ಅಕ್ಬರ್ ಬಾದಶಹನಿಗೆ ತನ್ನ ಹಲ್ಲುಗಳೆಲ್ಲಾ ಉದುರಿಹೋದಂತೆ ಸ್ವಪ್ನವಾಯಿತು. ಮರು ದಿನ ಅವನು ಆಸ್ಥಾನದ ಜೋಯಿಸನನ್ನು ಕರೆಯಿಸಿ ತನ್ನ ಸ್ವಪ್ನದ ಸಂಗತಿಯನ್ನು ಹೇಳಿ, ಇದರ ಫಲಿತ ವೇನೆಂದು ಕೇಳಿದನು.

ಜೋಯಿಸನು ತನ್ನ ಗ್ರಂಥಗಳನ್ನು ಪರಿಶೀಲಿಸಿ, ''ತಮ್ಮ ಕಣ್ಣಿನ ಮುಂದೆಯೇ ತಮ್ಮ ಬಂಧು ಬಳಗ ಪರಿವಾರದವರೆಲ್ಲಾ ಸಾಯುತ್ತಾರೆ.'' ಎಂದನು.

ಕೆಟ್ಟ ಮಾತು ಹೇಳಿದುದರಿಂದ ಅಕ್ಬರನಿಗೆ ಕೋಪ ಬಂದಿತು. ಹಿಂದೆ ಮುಂದೆ ಆಲೋಚಿಸದೆ ಆ ಕೂಡಲೇ ಆ ಜೋಯಿಸನನ್ನು ಸೆರೆಮನೆಗೆ ಕಳುಹಿಸಿದನು.

ಯಾವುದೋ ಕೆಲಸದ ಮೇಲೆ ಹೋಗಿದ್ದ ಬೀರಬಲನು ಸಭೆಗೆ ಬಂದು ನಡೆದ ಸಂಗತಿಯನ್ನು ತಿಳಿದುಕೊಂಡು, ನಿರಪರಾಧಿಯಾದ ಆ ಜೋಯಿಸನನ್ನು ಬಿಡುಗಡೆ ಮಾಡಿಸಬೇಕೆಂದು ಕೊಂಡನು.

ಅವನು ಬಾದಶಹನನ್ನು ನೋಡಿ, ''ಪ್ರಭುವೆ; ನಿಮಗೆ ಬಂದ ಸ್ವಪ್ನದ ಅರ್ಥವನ್ನು ನಾನು ಹೇಳಲೆ?'' ಎಂದು ಅನುಜ್ಞೆ ಪಡೆದು, ಬೆರಳುಗಳನ್ನೆಣಿಸಿ, ಆಕಾಶವನ್ನೂ ಭೂಮಿಯನ್ನೂ ನೋಡಿ, ''ಬಾದಶಹರೆ, ತಮ್ಮ ಬಂಧು ಬಳಗ ಪರಿವಾರದವರೆಲ್ಲರಿಗಿಂತಲೂ ಹೆಚ್ಚು ವರ್ಷ ಆಯುರ್ದಾಯ ತಮಗಿದೆ'' ಎಂದು ಬಿನ್ನವಿಸಿದನು.

''ಇಷ್ಟು ಒಳ್ಳೆಯ ಫಲ ಹೇಳಿದುದಕ್ಕೆ ನಿನಗೇನು ಬೇಕು? ಕೇಳು'' ಎಂದ ಅಕ್ಬರ್.

''ಆಸ್ಥಾನ ಜ್ಯೋತಿಷ್ಕನನ್ನು ಬಿಡುಗಡೆ ಮಾಡಿಸಬೇಕು'' ಎಂದ ಬೀರಬಲ.

ಅದರಂತೆ ಬಿಡುಗಡೆಯಾಗಿ ಬಂದ ಜೋಯಿಸನನ್ನು ಬೀರಬಲನು ಬದಿಗೆ ಕರೆದುಕೊಂಡು ಹೋಗಿ, ''ಜ್ಯೋತಿಷ್ಯ ಹೇಳಲು ಶಾಸ್ತ್ರಜ್ಞಾನ ಮಾತ್ರ ಸಾಲದು; ಅದನ್ನು ಹೇಳುವ ಕ್ರಮದಲ್ಲಿ ಲೌಕಿಕ ಜ್ಞಾನವೂ ಬೇಕು, ತಿಳಿಯಿತೆ?'' ಎಂದನು,





# ಸ್ವಂತಯೋಗ್ಯತೆ

ಒಂದು ಗ್ರಾಮದಲ್ಲಿ ಇಬ್ಬರು ಸ್ನೇಹಿತರಿದ್ದರು. ಒಬ್ಬನ ಹೆಸರು ರಾಮಶರ್ಮ, ಇನ್ನೊಬ್ಬನ ಹೆಸರು ಚಿನ್ನಯ್ಯ. ಈ ಸ್ನೇಹಿತರಿಬ್ಬರೂ ಬಹಳ ಬಡವರೇ. ಹೇಗಾದರೂ ತಮ್ಮ ಬಡತನದಿಂದ ಮುಕ್ತರಾಗ ಬೇಕೆಂದು, ಇಬ್ಬರೂ ಕೂಡಿ ಆಲೋಚನೆ ಮಾಡಿದರು. ಇದ್ದ ಊರಿನಲ್ಲಿ ಏನೂ ಲಾಭವಿಲ್ಲವೆಂದು ತೋರಿತು. ಬೇರೆಲ್ಲಿಗಾದರೂ ಹೋಗಿ ಧನ ಸಂಪಾದನೆ ಮಾಡಬೇಕೆಂದು ನಿಶ್ಚಯಿಸಿ, ಒಂದುದಿನ ಇಬ್ಬರೂ ತಮ್ಮ ಗ್ರಾಮದಿಂದ ಹೊರಟರು. ಬಹಳ ದೂರ ಪ್ರಯಾಣ ಮಾಡಿ ಬಳಲಿ ಬೆಂಡಾಗಿ, ಕಾಡಿನಲ್ಲಿದ್ದ ಒಬ್ಬ ಮುನಿಯ ಆಶ್ರಮದ ಮುಂದೆ "ಉಸ್ಸಪ್ಪ" ಎಂದು ಕುಸಿಕುಳಿತರು. ಮುನಿ ಅವರ ಬಳಿಗೆ ಬಂದು, ಯಾರು ಏನೆಂಬುದನ್ನೆಲ್ಲ ಕೇಳಿ ತಿಳಿದು ಆಮೇಲೆ ಹೀಗೆ ಹೇಳಿದ:

"ಅಪ್ಪಗಳಿರಾ, ನಾನು ಬಹಳ ಕಷ್ಟಪಟ್ಟು ಎಷ್ಟೋ ವಿದ್ಯೆಗಳನ್ನು ಸಾಧಿಸಿಕೊಂಡವನು. ನಿಮ್ಮಲ್ಲಿ ಒಬ್ಬನು ಬ್ರಾಹ್ಮಣ. ಬ್ರಾಹ್ಮಣನಿಗೆ ಧನದ ಮೇಲೆ ವ್ಯಾಮೋಹವಿರುವುದು ಒಳ್ಳೆಯದಲ್ಲ. ಬ್ರಾಹ್ಮಣನು ಜ್ಞಾನವನ್ನು ಸಂಪಾದಿಸಿ, ಅದನ್ನು ಹತ್ತು ಮಂದಿಗೆ ಕೊಟ್ಟು ಒಳ್ಳೆಯ ಹೆಸರನ್ನೂ, ಪ್ರಖ್ಯಾತಿಯನ್ನೂ ಪಡೆದರೆ ಬ್ರಾಹ್ಮಣ ಜನ್ಮವು ಸಾರ್ಥಕವಾಗುತ್ತದೆ. ಎರಡನೆಯವನು ವೈಶ್ಯನಲ್ಲವೆ? ಅವನು ನನ್ನ ಬಳಿಯಿಂದ ವ್ಯಾಪಾರದ ರಹಸ್ಯಗಳನ್ನು ಕಲಿತುಕೊಂಡು, ಧನ ಸಂಪಾದನೆ ಮಾಡಬಹುದು. ವ್ಯಾಪಾರ ವೃತ್ತಿಯಿಂದ ಧನ ಸಂಪಾದನೆಯಾಗುವುದು ಮಾತ್ರವಲ್ಲದೆ, ಪ್ರಜಾ ಸೇವೆ ಕೂಡಾ ಸಾಧ್ಯವಾಗುತ್ತದೆ. ಇದನ್ನು ತಿಳಿದು, ಅದಕ್ಕೆ ಸರಿಯಾಗಿ ನಡೆದುಕೊಳ್ಳುವವನೇ ನಿಜವಾದ ವೈಶ್ಯ."

ಮುನಿಯ ಸೂಚನೆಗಳು ಇಬ್ಬರಿಗೂ ಹಿಡಿಸಿದುವು. ಅವರಿಬ್ಬರೂ ಆ ಮುನಿಯ ಬಳಿಯಲ್ಲಿಯೇ ಶಿಷ್ಯರಾಗಿದ್ದು ಮೂರುವರ್ಷ ವಿದ್ಯಾಭ್ಯಾಸ ಮಾಡಿದರು. ರಾಮಶರ್ಮನು ಅನೇಕ ಶಾಸ್ತ್ರಗಳಲ್ಲಿ ಪಾಂಡಿತ್ಯ ಸಂಪಾದಿಸಿದನು. ಚಿನ್ನಯ್ಯ ಅರ್ಥ ಶಾಸ್ತ್ರವನ್ನೂ, ವ್ಯಾಪಾರ ರಹಸ್ಯಗಳನ್ನೂ ತಿಳಿದುಕೊಂಡನು. ಹೀಗೆ ಕಲಿತು ಮುಗಿಸಿದ ಮೇಲೆ ಇಬ್ಬರೂ ಮುಂದಿನ ಕಾರ್ಯಕ್ಕೆ ಅಲ್ಲಿಂದ ಹೊರಟರು.

ರಾಮಶರ್ಮನು ಅಲ್ಲಿಯ ರಾಜನ ಬಳಿಗೆ ಹೋಗಿ ಆಸ್ಥಾನದಲ್ಲಿ ಪಂಡಿತ ಸ್ಥಾನವನ್ನು ಗಳಿಸಿಕೊಂಡನು.

"ವಸುಂಧರ"

ಚಿನ್ನಯ್ಯನು ನಗರದಲ್ಲಿ ವ್ಯಾಪಾರಕ್ಕೆ ತೊಡಗಿ ಲಾಭ ಗಳಿಸುತ್ತ ಅಭಿವೃದ್ಧಿಗೆ ಬರತೊಡಗಿದನು. ನಾಲ್ಕೈದು ವರ್ಷಗಳಲ್ಲಿ ಇಬ್ಬರೂ ಧನಸಂಪನ್ನರಾದರು.

ಕಾಲಕ್ರಮದಲ್ಲಿ ರಾಮಶರ್ಮನಿಗೆ ಕೃಷ್ಣಶರ್ಮ ನೆಂಬ ಮಗನು ಹುಟ್ಟಿದ. ಮಗನು ಬೆಳೆಯುತ್ತಾ ಬಂದಂತೆ ರಾಮಶರ್ಮನಿಗೆ ಚಿಂತೆಯುಂಟಾಗತೊಡಗಿತು. ಮಗನು ಕೇವಲ ಆಟದ ಬುದ್ಧಿಯುವನಾಗಿದ್ದ. ಓದುಬರೆಹಗಳ ಮೇಲೆ ಅವನಿಗೆ ಸ್ವಲ್ಪವೂ ಉತ್ಸಾಹವಿಲ್ಲ. ಯಾವಾಗಲೂ ಆಟವಾಡುತ್ತ, ತಂಟೆ ಮಾಡುತ್ತ ಕಾಲಹರಣ ಮಾಡುತ್ತಿದ್ದನು. ತನ್ನ ಮಗನು ತನ್ನ ಹಾಗೆ ಪ್ರಖ್ಯಾತಿಗೆ ಬರಬೇಕೆಂದು ರಾಮಶರ್ಮನು ಮಾಡಿದ ಪ್ರಯತ್ನವು ಸ್ವಲ್ಪ ಕೂಡ ಫಲಿಸುವಂತೆ ಕಾಣಲಿಲ್ಲ.

ಹೀಗಿರುವಾಗ ಒಂದುದಿನ ಒಂದು ವಿಚಿತ್ರ ಸಂಗತಿ ನಡೆಯಿತು. ರಾಮಶರ್ಮನು ಗುರುಸ್ಥಾನದಲ್ಲಿ ವಿದ್ಯಾರ್ಥಿಗಳಿಗೆ ಕೆಲವು ಶ್ಲೋಕಗಳನ್ನು ಬೋಧಿಸುತ್ತಿದ್ದನು. ಅವು ತುಂಬ ಕಠಿನವಾದ ಶ್ಲೋಕಗಳಾದುದರಿಂದ ಅವುಗಳ ಅರ್ಥವನ್ನು ಗ್ರಹಿಸಲು ಹುಡುಗರಿಂದಾಗಲಿಲ್ಲ. ಹೇಳಿದುದನ್ನೇ ಹೇಳಿ ಹೇಳಿ ರಾಮಶರ್ಮನಿಗೆ ಬಾಯಿ ನೋವಾಗಿ, ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಳ್ಳೋಣವೆಂದು ತೋರಿದುದರಿಂದ ಒಳಗೆ ಹೋದನು.

ತನ್ನ ತಂದೆ ಶಿಷ್ಯರಿಗೆ ಪಾಠ ಹೇಳಿ ಕೊಡಲು ಎಷ್ಟು ಕಷ್ಟಪಡುವರೆಂಬುದನ್ನು ಕೃಷ್ಣಶರ್ಮ ಗಮನಿಸಿಕೊಂಡೇ ಇದ್ದನು. ತಂದೆ ಒಳಗೆ ಹೋದ ಕೂಡಲೇ ಅವನು ಬಂದು ತಂದೆಯ ಆಸನದ ಮೇಲೆ ಕುಳಿತು ತಾನೇ ಹುಡುಗರಿಗೆ ಪಾಠ ಹೇಳಲು ಪ್ರಾರಂಭಿಸಿದನು. ವಿಚಿತ್ರವೆಂದರೆ, ರಾಮಶರ್ಮನ ಬಾಯಿಯಿಂದ ಹೊರಟಾಗ ಅರ್ಥವಾಗದ ಶ್ಲೋಕಗಳು, ಕೃಷ್ಣಶರ್ಮನ ಬಾಯಿಯಿಂದ ಹೊರಟಾಗ ವಿದ್ಯಾರ್ಥಿಗಳಿಗೆಲ್ಲ ಬಹುಸುಲಭದಲ್ಲಿ ಅರ್ಥವಾಯಿತು.



ಒಳಗಿನಿಂದ ಹೊರಗೆ ಬಂದ ರಾಮಶರ್ಮನು ಆ ದೃಶ್ಯವನ್ನು ನೋಡಿ ಆಶ್ಚರ್ಯಪಟ್ಟನು. ತನ್ನ ಮಗನು ಮೆದುಳಿಲ್ಲದ ಮೂಢನಲ್ಲ. ಅವನ ಜ್ಞಾಪಕ ಶಕ್ತಿ ಕೂಡಾ ಬಲವಾದುದೇ. ಓದಿನಲ್ಲಿ ಶ್ರದ್ಧೆ ಬಂದುಬಿಟ್ಟರೆ ಅವಲೀಲೆಯಾಗಿ ಎಷ್ಟೋ ದೊಡ್ಡ ಪಂಡಿತನಾಗಬಲ್ಲನು.

ಹೀಗೆ ಸಮಾಧಾನಗೊಂಡು ಮಗನ ಬೆನ್ನುತಟ್ಟಿ ರಾಮಶರ್ಮನು ಮಗನಿಗೆ ಓದುವ ಸಂಗತಿಯನ್ನು ಬೋಧಿಸಲು ತೊಡಗಿ, "ನೀನು ಶ್ರದ್ಧೆಯಿಂದ ಕಲಿಯಲೇ ಬೇಕಪ್ಪ" ಎಂದನು.

"ಏಕೆ ಓದಬೇಕು?" ಎಂದು ಕೃಷ್ಣಶರ್ಮ ತಿರುಗಿ ಕೇಳಿದ. "ಹತ್ತು ಜನರಿಂದ ಗೌರವ ಹೊಂದಬೇಕಾದರೆ, ದೊಡ್ಡವನೆನಿಸಬೇಕಾದರೆ, ಧನ ಸಂಪಾದನೆ ಮಾಡಬೇಕಾದರೆ, ಮಾನವರಿಗೆ ಓದು ಬರೆಹಗಳು ಅತೀ ಅಗತ್ಯವಪ್ಪಾ" ಎಂದ ರಾಮಶರ್ಮ.

"ನನಗೆ ಅಂತಹ ಅಗತ್ಯವೇನಿದೆ? ಮಹಾ ಪಂಡಿ



ತರ ಮಗನೆಂದು ಎಲ್ಲರೂ ನನ್ನನ್ನು ಗೌರವಿಸುತ್ತಾರೆ. ಬ್ರಾಹ್ಮಣನಾದುದರಿಂದ ಎಲ್ಲರೂ ದೊಡ್ಡವನೆನ್ನುತ್ತಾರೆ. ಧನವಂತನ ಮಗನಾದ ನಾನು ಧನ ಸಂಪಾದಿಸುವ ಅಗತ್ಯವೇನಿದೆ? ನೀವು ಹೇಳುವ ಹಾಗೆ ಕೀರ್ತಿ ಗೌರವ ಧನ ಎಲ್ಲವೂ ಇರುವಾಗ ವೃಥಾ ಕಲಿಯುವುದೇಕೆ?" ಎಂದು ಕೇಳಿದ ಕೃಷ್ಣಶರ್ಮ.

ಮಗನ ಬುದ್ಧಿ ಹೇಗೆ ಹೋಗುತ್ತದೆಂಬುದು ರಾಮಶರ್ಮನಿಗೆ ಗೊತ್ತಾಯಿತು. ಅದನ್ನು ಬದಲಾಯಿಸಲು ಏನುಮಾಡಬೇಕೆಂದು ಆಲೋಚಿಸತೊಡಗಿದನು. ಆಗ ಅವನ ಬಳಿಗೆ ಚಿನ್ನಯ್ಯ ಬಂದನು. ಇಬ್ಬರೂ ತಮ್ಮ ಪಾಡಿಗೆ ಮಾತುಕತೆಗೆ ತೊಡಗಿದರು. ಚಿನ್ನಯ್ಯ ಕೂಡಾ ತನ್ನ ಮಗನನ್ನು ಕುರಿತು ರಾಮಶರ್ಮನ ಹಾಗೆಯೇ ಬಾಧೆ ಪಡುತ್ತಿರುವ ಸಂಗತಿ ಹೊರಗೆ ಬಂತು. ಚಿನ್ನಯ್ಯನ ಮಗ ಮುತ್ತಣ್ಣ ಕೂಡಾ ಕೇವಲ 'ಅನ್ನ ದಂಡ, ಭೂಮಿ ಭಾರ' ದವನಾಗಿ, ತಂದೆ ಸರಿಯಾದ ದಾರಿಗೆ ತಿರುಗಿಸಲು ನೋಡಿದಾಗ "ನನಗೇನಪ್ಪಾ, ಧನವಂತರ ಮಗನಾಗಿದ್ದೇನೆ. ಹಾಗೆಲ್ಲ ಕಷ್ಟಪಟ್ಟು ಬುದ್ಧಿಯನ್ನು ತೀಡುವ ಅಗತ್ಯವೇನಿದೆ?" ಎನ್ನುತ್ತಾನೆ.

ಈ ವಿಷಯದಲ್ಲಿ ಇಬ್ಬರೂ ಒಂದಾಗಿ ಮಾತಾಡಿಕೊಂಡು, ಒಂದು ಯೋಜನೆ ಮಾಡಿಕೊಂಡರು. ಆ ಪ್ರಕಾರ ಚಿನ್ನಯ್ಯ ತನ್ನ ಮಗ ಮುತ್ತಣ್ಣನನ್ನು ರಾಮಶರ್ಮನ ಮನೆಯಲ್ಲಿ ಬಿಟ್ಟು, ತಾನು ತನ್ನ ಹೆಂಡತಿಯೊಂದಿಗೆ ವ್ಯಾಪಾರದ ನೆವನ ಮಾಡಿ ನಗರದಿಂದ ಎಲ್ಲಿಗೋ ಹೊರಟು ಹೋದನು. ಹೋಗುವಾಗ ಅವನು ತನ್ನ ಮಗನಿಗೆ ಸೇವೆಮಾಡಲು ಇಬ್ಬರು ಸೇವಕರನ್ನು ನಿಯಮಿಸಿದ್ದನು.

ಕೆಲವು ದಿನಗಳಲ್ಲಿ ಕೃಷ್ಣಶರ್ಮನಿಗೂ ಮುತ್ತಣ್ಣನಿಗೂ ತುಂಬ ಸ್ನೇಹವಾಯಿತು. ಇಬ್ಬರೂ ಒಂದೇ ಬಗೆಯ ಗುಣಗಳನ್ನು ತುಂಬಿಕೊಂಡವರು. ಮುತ್ತಣ್ಣನ ಸೇವಕರು ಕೃಷ್ಣಶರ್ಮನಿಗೂ ಸೇವೆ ಮಾಡುತ್ತಿದ್ದರು. ಇಬ್ಬರಿಗೂ ಹಾಯಾಗಿ ದಿನ ಕಳೆಯುತ್ತಿತ್ತು.

ಎರಡು ತಿಂಗಳು ಕಳೆಯಿತು. ಒಂದುದಿನ ರಾಮಶರ್ಮನು ಮುತ್ತಣ್ಣನನ್ನು ಕರೆದು, "ನಿನ್ನ ತಂದೆ ಹಣ ಬೇಕೆಂದು ಸಮಾಚಾರ ಕಳುಹಿಸಿದ್ದಾರೆ. ನಿಮ್ಮ ಮನೆಯನ್ನು ಮಾರಿ ಹಣವನ್ನು ಕಳಿಸಿಬಿಡು" ಎಂದನು. ಆದರೆ ಈ ಮಾತನ್ನು ಮುತ್ತಣ್ಣ ಕಿವಿ ಮೇಲೆ ಹಾಕಿಕೊಳ್ಳಲಿಲ್ಲ.

ಮತ್ತೊಂದು ತಿಂಗಳು ಕಳೆಯಿತು. ಒಂದುದಿನ ರಾಮಶರ್ಮನ ಬಳಿಗೆ ಒಬ್ಬ ಮನುಷ್ಯನು ಬಂದು "ಚಿನ್ನಯ್ಯನವರ ಸರಕು ತುಂಬಿದ ಹಡಗು ತುಫಾನಿಗೆ ಸಿಕ್ಕಿ ಮುಳುಗಿತು. ಅದರೊಂದಿಗೆ ಚಿನ್ನಯ್ಯನೂ ಅವರ ಹೆಂಡತಿಯೂ, ಅವರ ಪೂರ್ಣ ಸೊತ್ತೂ ಮುಳುಗಿ ಹೋದುವು. ನಾನು ಚಿನ್ನಯ್ಯನನ್ನು ಕೊನೆಯುಸಿರಿನೊಂದಿಗೆ ತೀರಕ್ಕೆ ತಂದು ನನ್ನ ಮನೆಗೆ ಸೇರಿಸಿದೆ. ಆದರೆ ಆತ ಬದುಕಲಿಲ್ಲ" ಎಂದನು.

ಈ ಮಾತನ್ನು ಕೇಳಿ ಅಳತೊಡಗಿದ ಮುತ್ತಣ್ಣ ನಿಗೆ ರಾಮಶರ್ಮ ಅಕ್ಕರೆಯಿಂದ ಸಮಾಧಾನ ಗಳನ್ನು ಹೇಳಿದನು. ಕಡೆಗೆ ಒಂದು ವಿಷಯ ಮಾತ್ರ ಸ್ಪಷ್ಟವಾಗಿ ಮುತ್ತಣ್ಣನಿಗೆ ಹೇಳಿದನು. "ನೋಡಪ್ಪಾ, ನಾನು ನಿನ್ನ ತಂದೆಯ ಹಾಗೆ ವ್ಯಾಪಾರ ವೃತ್ತಿಯವ ನಲ್ಲ. ನಿನ್ನನ್ನು ಪೋಷಿಸಲಿಕ್ಕೆ ಇನ್ನು ನನಗೆ ಸಾಧ್ಯ ವಿಲ್ಲ. ಆದುದರಿಂದ ನಿನ್ನದಾರಿ ನೀನು ನೋಡಿ ಕೊಂಡು ಹೋಗಬೇಕು."

ಈ ಮಾತು ಕೇಳಿ ಮುತ್ತಣ್ಣನಿಗೆ ಪೌರುಷ ಬಂದಿತು. ಸರಿ ಎಂದು ಹೇಳಿ ರಾಮಶರ್ಮನ ಮನೆ ಯಿಂದ ಹೊರಟು ಹೋದನು. ಆದರೆ ಅವನಿಗೆ ವಾಸ ಮಾಡಲು ಸರಿಯಾದ ಜಾಗ ಎಲ್ಲಿಯೂ ಸಿಗ ಲಿಲ್ಲ. ಅವನ ಹೊಟ್ಟೆಗೆ ಕೂಡಾ ಯಾರೂ ಏನೂ ನೀಡಲಾರದೆ ಹೋದರು. ನಿರುಪಾಯನಾದ ಮೇಲೆ ಅವನು ಪೌರುಷ ಅಭಿಮಾನಗಳನ್ನೆಲ್ಲ ಕೊಂದು ಕೊಂಡು ರಾಮಶರ್ಮನ ಮನೆಗೆ ಬಂದು, ಊಟ ಹಾಕುವಂತೆ ಕೇಳಿದನು.

ರಾಮಶರ್ಮ ಅವನಿಗೆ ಊಟ ಹಾಕಿದರೂ, ಈ ರೀತಿ ದಿನಾ ಸಾಧ್ಯವಿಲ್ಲವೆಂದು ಹೇಳಿಬಿಟ್ಟನು. ತಂದೆ ತನ್ನ ಗೆಳೆಯನಿಗೆ ಹೇಳಿದ ಮಾತನ್ನು ಕೇಳಿ ಕೃಷ್ಣಶರ್ಮ ಕೋಪದಿಂದ, "ಏನಪ್ಪ ಇದು ? ನಿಮ್ಮ ಸ್ನೇಹಿತರ ಮಗನಿಗೆ ಸ್ವಲ್ಪ ಕೂಡ ಆದರ ತೋರಿಸುವುದಿಲ್ಲವೆ ?" ಎಂದು ಕೇಳಿದ.

"ಹೌದಪ್ಪ. ಚಿನ್ನಯ್ಯ ನನ್ನ ಸ್ನೇಹಿತ ನಿಜ. ಅವನು ಕಷ್ಟದಲ್ಲಿದ್ದರೆ ತಪ್ಪದೆ ಉಪವಾಸ ಬಿದ್ದಾದರೂ ಆದರಿಸುತ್ತಿದ್ದೆ. ಮುತ್ತಣ್ಣನಿಗೂ ನನಗೂ ಏನು ಸಂಬಂಧ ?" ಎಂದ ರಾಮಶರ್ಮ.

"ಮುತ್ತಣ್ಣ ನಿಮಗೆ ಸ್ನೇಹಿತನಲ್ಲದೆ ಹೋಗ ಬಹುದು. ಅವನು ನನಗೆ ಸ್ನೇಹಿತ. ನನ್ನ ಸ್ನೇಹಿತ ನಿಗೆ ಈ ಮನೆಯಲ್ಲಿ ಗೌರವ ಸಿಗುವುದಿಲ್ಲವೇ ?" ಎಂದು ಕೇಳಿದ ಕೃಷ್ಣಶರ್ಮ.



"ನಿನ್ನ ದೊಡ್ಡತನವೆಂತಹುದು ?" ಎಂದು ರಾಮಶರ್ಮ ಮಗನನ್ನು ಕೇಳಲು, ಕೃಷ್ಣಶರ್ಮನು ವಾದಕ್ಕೆ ನಿಂತವನಂತೆ, "ದೇವರಿಗೆ ಅರ್ಚನೆ ಮಾಡಿದ ಮಾತ್ರಕ್ಕೆ ಅರ್ಚಕರನ್ನು ದೇವರ ಹಾಗೆಯೇ ಗೌರವಿ ಸುತ್ತೇವಷ್ಟೆ ? ಮಹಾಪಂಡಿತರಾದ ರಾಮಶರ್ಮನ ಮಗನೆಂದರೆ ನನಗೆ ಕೂಡ ದೊಡ್ಡತನವಲ್ಲವೆ ?" ಎಂದು ಸವಾಲು ಹಾಕಿದ.

ರಾಮಶರ್ಮ ಒಂದು ನಿಮಿಷ ಆಲೋಚನೆ ಮಾಡಿ, "ನಿನ್ನ ಪ್ರಶ್ನೆಗೆ ಸಮಾಧಾನ ಹೇಳುತ್ತೇನೆ. ಆದರೆ ಮೊದಲು ನೀನೊಂದು ಕೆಲಸ ಮಾಡಬೇಕು. ನಿನಗೂ ಮುತ್ತಯ್ಯನಿಗೂ ಸೇವೆ ಮಾಡಿದ ಆ ಇಬ್ಬರು ಸೇವಕರನ್ನೂ ಕರೆದು ಅವರಿಂದ ಮುತ್ತಣ್ಣ ನಿಗೆ ಸೇವೆ ಮಾಡಿಸು. ಅವರನ್ನು ಮುತ್ತಣ್ಣನ ತಂದೆ ಮುತ್ತಣ್ಣನಿಗಾಗಿ ಕಳಿಸಿದ್ದಾನಷ್ಟೆ ?" ಎಂದನು.

"ಅದಕ್ಕೇನು ?" ಎಂದು ಕೃಷ್ಣಶರ್ಮ ಬಹಳ ಉತ್ಸಾಹದಿಂದ ಅತ್ತ ಹೋದನು. ಆ ಸೇವಕರು

ಈವರೆಗೆ ಒಂದು ಪೈಸೆ ಕೂಡಾ ಕೇಳದೆ ಬಹು ವಿನಯದಿಂದ ಸೇವೆ ಮಾಡಿದವರು. ಆದರೆ ಈಗ ಕೃಷ್ಣಶರ್ಮ ಹೇಳಿದಾಗ, ಅವರು ಮುತ್ತಣ್ಣನನ್ನು ಕುರಿತು ನಿರ್ಲಕ್ಷ್ಯವಾಗಿ ಮಾತಾಡಿ ಅಂತಹ ದರಿದ್ರದವರಿಗೆಲ್ಲ ನಾವು ಸೇವೆ ಮಾಡಲಾರೆವೆಂದು ಹೇಳಿ ಅತ್ತ ಹೋಗಿಬಿಟ್ಟರು.

ಅವರ ಮಾತಿಗೆ ಆಶ್ಚರ್ಯಪಡುತ್ತ ಕೃಷ್ಣಶರ್ಮ ತಂದೆಯ ಬಳಿಗೆ ಬಂದು ಮುಖ ತಗ್ಗಿಸಿ ನಡೆದ ಸಂಗತಿಯನ್ನು ಹೇಳಿದನು.

ರಾಮಶರ್ಮ ನಗುತ್ತ, "ಹೌದು. ಅವರು ಸರಿಯಾಗಿಯೇ ಹೇಳಿದರು. ಮುತ್ತಣ್ಣನಿಗೆ ಸ್ವಂತ ವ್ಯಕ್ತಿತ್ವವೇನೂ ಇಲ್ಲ. ಅವನು ತಂದೆಯ ನೆರಳಿನಲ್ಲಿರುವವರೆಗೂ ತಂದೆಯ ಹಣ ಅವನಿಗೆ ರಕ್ಷಣೆಯಾಯಿತು. ಆ ಹಣ ಹೋದ ಮೇಲೆ ಅವನೊಬ್ಬ ಸಾಮಾನ್ಯ ಮನುಷ್ಯನಾದ. ನಾಳೆ ನಿನ್ನ ಗತಿ ಕೂಡಾ ಅಷ್ಟೇ ಆಗುತ್ತದೆ. ನನ್ನ ಪಾಂಡಿತ್ಯದ ಮೂಲಕ ಈಗೇನೋ ನೀನು ಗೌರವ ಪಡೆಯುತ್ತಿರುವಿ. ನನಗಿರುವ ಆಸ್ತಿ ಈ ಪಾಂಡಿತ್ಯ ಮಾತ್ರ, ಇಂತಹ ಪಾಂಡಿತ್ಯ ನಿನಗೆ ಬಾರದಿದ್ದರೆ ನಿನ್ನ ಕತೆಯೂ ಅಷ್ಟೇ ತಾನೆ? ಸ್ವಂತ ಸಂಪಾದಿಸಿದ್ದೇ ತನ್ನದು. ವ್ಯಾಪಾರದ ರಹಸ್ಯ ತಿಳಿಯದವನು ವೈಶ್ಯನಲ್ಲ. ವಿದ್ಯೆ ಕಲಿಯದವನು ಬ್ರಾಹ್ಮಣನಲ್ಲ." ಎಂದನು.

"ಈಗ ಗೊತ್ತಾಯಿತು, ಅಪ್ಪಾ. ವ್ಯಕ್ತಿತ್ವಕ್ಕೆ ಸ್ವಂತ ಯೋಗ್ಯತೆ ಅಗತ್ಯವೆಂದು ಗೊತ್ತಾಯಿತು. ಆದುದರಿಂದಲೇ ನೀವು ನಿಮ್ಮ ಸ್ನೇಹಿತನಿಗೆ ಮಾಡಬಲ್ಲ ಸಹಾಯವನ್ನು ನಾನು ನನ್ನ ಸ್ನೇಹಿತನಿಗೆ ಮಾಡಲಾರದೆ ಹೋದೆ. ಈಗ ಏನು ಮಾಡಬೇಕು? ನನ್ನ ಗೆಳೆಯ ಮುತ್ತಣ್ಣನ ಗತಿಯೇನು?" ಎಂದು ಕೇಳಿದ ಕೃಷ್ಣಶರ್ಮ.

"ನೀನೂ ನಿನ್ನ ಸ್ನೇಹಿತನೂ ನಾನು ಹೇಳಿದ ಸ್ಥಳಕ್ಕೆ ಹೋಗಿ ಕೆಲವು ವರ್ಷ ವಿದ್ಯಾಭ್ಯಾಸ ಮಾಡಿರಿ" ಎಂದು ರಾಮಶರ್ಮ, ತಾವಿಬ್ಬರೂ ವಿದ್ಯಾಭ್ಯಾಸ ಮಾಡಿದ ಮುನಿಯ ಆಶ್ರಮದ ವಿವರವನ್ನು ಹೇಳಿದನು.

ಕೃಷ್ಣಶರ್ಮನೂ ಮುತ್ತಣ್ಣನೂ ಎರಡು ವರ್ಷಗಳವರೆಗೆ ಆ ಮುನಿಯ ಆಶ್ರಮದಲ್ಲಿ ವಿದ್ಯಾಭ್ಯಾಸ ಮಾಡಿ ಹಿಂದಿರುಗಿ ಬಂದರು. ಆಗ ಊರೊಳಗೆ ಅವರಿಬ್ಬರಿಗೂ ಆಶ್ಚರ್ಯವು ಕಾದಿತ್ತು. ಚಿನ್ನಯ್ಯ ಸಮುದ್ರದಲ್ಲಿ ಮುಳುಗಿ ಸಾಯಲೂ ಇಲ್ಲ; ಅವನ ಸೊತ್ತು ಮುಳುಗಲೂ ಇಲ್ಲ. ಬದಲಿಗೆ ಎರಡು ಪಾಲು ಸೊತ್ತು ಗಳಿಸಿಕೊಂಡಿದ್ದ. ತಮ್ಮ ಮಗಂದಿರ ಬುದ್ಧಿಯನ್ನು ಬದಲಾಯಿಸಲಿಕ್ಕಾಗಿ ರಾಮಶರ್ಮನೂ ಚಿನ್ನಯ್ಯನೂ ಕೂಡಿ ಮಾಡಿಕೊಂಡ ಯೋಜನೆಯೇ ಆ ನಾಟಕವೆಂದು ಅವರಿಗೆ ಗೊತ್ತಾಯಿತು.



ಕಂಡೆ. ಆಗ ನನಗೊಂದು ಸಮಾಚಾರ ತಿಳಿಯಿತು. ಚಿತ್ರಪುರ ಎಂಬ ಈ ವಿಚಿತ್ರ ದೇಶದ ರಾಜನ ಮಗಳು ಸೌಂದರ್ಯದಲ್ಲಿ ಸಾಟಿಯಿಲ್ಲದವಳೆಂದು ತಿಳಿಯಿತು. ಯಾವುದೋ ಒಂದು ಪಂದ್ಯದಲ್ಲಿ ಗೆದ್ದವನನ್ನು ಮದುವೆಯಾಗುತ್ತಾಳಂತೆ. ರಾಜ್ಯವನ್ನೂ ಅವನಿಗೇ ಕೊಡಿಸುತ್ತಾಳಂತೆ. ಆ ಪ್ರಕಟನೆಯೊಂದಿಗೆ ಅವಳ ಚಿತ್ರ ಪಟವೂ ಇದ್ದಿತು. ಅದನ್ನು ನೋಡಿದ ಮೇಲೆ ಅವಳ ಅದ್ಭುತ ಸೌಂದರ್ಯವು ನನ್ನನ್ನು ಸೆರೆ ಹಿಡಿಯಿತು. ಈ ದೇಶವನ್ನು ವಿಚಾರಿಸಿಕೊಂಡು ಬಂದೆ. ಅವಳ ದರ್ಶನವೂ ಆಯಿತು. ಅವಳು ನನಗೆ ಹೃದಯಪೂರ್ವಕವಾಗಿ ಸ್ವಾಗತ ಹೇಳಿದಳು. ಅವಳ ಸೌಂದರ್ಯ ನೋಡಿ ನಾನು ಹುಚ್ಚನೇ ಆದೆ. ಅಂಥವಳ ಯೋಗ ಕೂಡಿ ಬಂದಿರುವ ನನ್ನ ಪುಣ್ಯಕ್ಕೆ ಎಣೆಯಿಲ್ಲವೆಂದುಕೊಂಡು ನನ್ನ ಹೃದಯ ಆನಂದ ಸಾಗರದಲ್ಲಿ ತೇಲತೊಡಗಿತು.

"ನಾನಿಡುವ ಪಂದ್ಯದಲ್ಲಿ ಭಾಗವಹಿಸುವ ಮೊದಲು ಒಂದು ಷರತ್ತಿದೆ. ನೀನು ಪಂದ್ಯದಲ್ಲಿ ಸೋತುಹೋದರೆ ಜೀವಮಾನಪರ್ಯಂತ ನನಗೆ ಸೇವಕನಾಗಿರಬೇಕು. ಇದಕ್ಕೆ ಒಪ್ಪುವಿಯಾದರೆ ಪಂದ್ಯವೇನೆಂದು ಹೇಳುತ್ತೇನೆ. ಒಪ್ಪದಿದ್ದರೆ ಸುಮ್ಮನೆ ಹಿಂದಿರುಗಿಬಿಡು" ಎಂದು ಅವಳು ನನ್ನನ್ನು ಎಚ್ಚರಿಸಿ ಹೇಳಿದಳು.

'ಅವಳ ಮಧುರವಾಣಿಗೆ ಮುಗ್ಧನಾಗಿ ಅದಕ್ಕೆ ಒಪ್ಪಿಕೊಂಡೆ. ಅವಳು ನನಗೊಂದು ಖಾಲೀ ಪಾತ್ರ ವನ್ನು ತೋರಿಸಿದಳು. ಆಮೇಲೆ ಒಂದು ಚೀಲ ದಿಂದ ಎರಡು ಸಣ್ಣ ಸಣ್ಣ ಪೆಟ್ಟಿಗೆಗಳನ್ನು ತೆಗೆದಳು. ಅವಳ ಅಂಗೈಯಲ್ಲಿ ಹಿಡಿಸುವಷ್ಟೇ ಚಿಕ್ಕ ಪೆಟ್ಟಿಗೆಗಳು. ಅವುಗಳನ್ನು ಖಾಲೀಪಾತ್ರದ ಬದಿಯಲ್ಲಿಟ್ಟಳು. ಒಂದು ಪೆಟ್ಟಿಗೆಯನ್ನು ತೆಗೆದು ಅಡಿಸಿದಳು. ಹಾಗೆ ಆಡಿಸುವಾಗ ಆ ಪೆಟ್ಟಿಗೆಯೊಳಗಿನಿಂದ ಯಾವ ಶಬ್ದವೂ ಕೇಳಿಸಲಿಲ್ಲ. ಆದುದರಿಂದ ಅದರೊಳಗೆ ಏನೂ ಇಲ್ಲವೆಂದು ಗೊತ್ತಾಗುತ್ತದೆ. ಅದನ್ನು ಅವಳು ಆ ಪಾತ್ರದೊಳಗಿಟ್ಟು, ಎಡದ ಕೈಯಿಂದ ಇನ್ನೊಂದು ಪೆಟ್ಟಿಗೆಯನ್ನು ಎತ್ತಿ ಅದನ್ನೂ ಆಡಿಸಿ





ದಳು. ಅದರೊಳಗೆ ಏನೋ ಇರುವ ಹಾಗೆ ಶಬ್ದ ವಾಯಿತು. ಅವಳು ಅದನ್ನು ಕೂಡಾ ಪಾತ್ರದೊಳಗೆ ಇಟ್ಟು ನನ್ನ ಕಡೆಗೆ ತಿರುಗಿ, 'ಯುವಕನೇ, ಈ ಪಾತ್ರ ದೊಳಗೆ ಎರಡು ಪೆಟ್ಟಿಗೆಗಳಿವೆ. ಒಂದು ಪೆಟ್ಟಿಗೆಯಲ್ಲಿ ಒಂದು ನಾಣ್ಯವಿದೆ. ನಾಣ್ಯವಿರುವ ಪೆಟ್ಟಿಗೆಯನ್ನು ನೀನು ತೆಗೆದುಕೊಡು. ಹಾಗೆ ಮಾಡಿದರೆ ನಾನೂ ಈ ರಾಜ್ಯವೂ ನಿನ್ನದೇ ಆಗುತ್ತದೆ. ತಪ್ಪಿದರೆ ನನ್ನ ಸೆರೆ ಯಾಳಾಗುವಿ. ನಿನ್ನ ಅದೃಷ್ಟ ಹೇಗಿದೆಯೋ ನೋಡುವಾ ' ಎಂದಳು.

"ನಾನು ಈ ಪರೀಕ್ಷೆಯಲ್ಲಿ ಸೋತು ಹೋದೆ. ಒಂದು ಪೆಟ್ಟಿಗೆಯನ್ನು ತೆಗೆದು ಆಡಿಸಿದೆ. ಅದರೊಳಗಿ ನಿಂದ ಶಬ್ದ ಬರಲಿಲ್ಲ. ಅವಳು ತನ್ನ ಎಡದ ಕೈಯಿಂದ ಪಾತ್ರದಲ್ಲಿದ್ದ ಎರಡನೇ ಪೆಟ್ಟಿಗೆಯನ್ನು ತೆಗೆದು ಆಡಿಸಿ ದಳು. ಅದರೊಳಗಿನಿಂದ ಶಬ್ದ ಬಂತು. ನಾನು ತಪ್ಪಿ ಅವಳ ಸೇವಕನಾಗಿ ಹೋದೆ. ನನ್ನ ಹಾಗೆಯೇ ಪಂದ್ಯದಲ್ಲಿ ಸೋತು ಅವಳ ಸೇವಕರಾಗಿ ಹೋದವ ರಲ್ಲಿ ನಾನೂ ಒಬ್ಬನಾದೆ. ನನ್ನ ಮನಸ್ಸಿನ ಗೋಪುರ ವೆಲ್ಲಾ ಧೂಳು ಧೂಳಾಗಿ ಹೋಯಿತು. ಅವಳೀಗ ನನ್ನ ದೃಷ್ಟಿಗೆ ರಕ್ಕಸಿ.

"ದಿನಗಳು ಕಳೆದುವು. ಆ ಹೀನ ಜೀವಿತದಿಂದ ತಪ್ಪಿಸಿಕೊಂಡು ಹೋಗಲು ಮಾರ್ಗ ಹುಡುಕುತ್ತಾ ಇದ್ದೆ. ನಾನು ಅವಳ ಸೇವೆಯನ್ನು ಸಮರ್ಥತೆಯಿಂದ ಮಾಡಿ ಸ್ವಲ್ಪಮಟ್ಟಿಗೆ ಅವಳ ಅಭಿಮಾನಕ್ಕೂ ಪಾತ್ರ ನಾದೆ. ಒಂದುದಿನ ನಾನು ಏನೋ ಸೌಖ್ಯವಿಲ್ಲದವ ನಂತೆ ನಟಿಸುತ್ತಾ, ರಾಣಿಯನ್ನು ನೋಡಬೇಕೆಂದು ಸಮಾಚಾರ ಕಳುಹಿಸಿದೆ. ರಾಣಿ ನನ್ನನ್ನು ನೋಡಲು ಬಂದು "ಯುವಕನೇ, ನಿನಗೆ ಏನಾಯಿತು?" ಎಂದು ಕೇಳಿದಳು.

'ದಯಾಮಯಿಯಾದ ಮಹಾರಾಣಿಯವರೇ, ಈ ದೀನನನ್ನು ನೋಡಲು ಬಂದುದಕ್ಕೆ ಕೃತಜ್ಞತೆಗಳು. ನಾನು ಬದುಕಲಾರೆ, ಸಾಯುತ್ತೇನೆ. ಒಂದೇ ಒಂದು ಕೋರಿಕೆ ಕೇಳುತ್ತೇನೆ. ನಾನು ರಾಜವಂಶದಲ್ಲಿ ಹುಟ್ಟಿ ದವನು. ನಮ್ಮ ವಂಶಾಚಾರದ ಪ್ರಕಾರ ನನ್ನ ಶವ ವನ್ನು ದಹನ ಮಾಡಿಸಬಾರದು; ಮಣ್ಣಿನಲ್ಲಿ ಹುಗಿಸ ಬೇಕು. ನಾನು ಸತ್ತಮೇಲೆ, ನನ್ನನ್ನು ದಾಸ್ಯವಿಮುಕ್ತ ಮಾಡಿ ನಗರದ ಹೊರಗಿನ ಸ್ಮಶಾನದಲ್ಲಿ ಹುಗಿಸಿ ಬಿಡಿರಿ' ಎಂದು ಕೇಳಿಕೊಂಡೆ.

"'ಆಗಲಪ್ಪ, ಹಾಗೆಯೇ ಮಾಡುತ್ತೇನೆ. ನಿಶ್ಚಿಂತೆ ಯಿಂದ ಬದುಕಿಕೊಂಡಿರು. ಸತ್ತರೆ ನಿನಗೆ ತೃಪ್ತಿ ಯಾಗುವಂತೆಯೇ ಮಾಡಿಸುತ್ತೇನೆ' ಎಂದಳು ರಾಣಿ. ನಾನು ಮತ್ತೊಮ್ಮೆ ಅವಳಿಗೆ ಕೃತಜ್ಞತೆ ಹೇಳಿದೆ"

ಈ ಕಥೆಯನ್ನು ಆಸಕ್ತಿಯಿಂದ ಕೇಳುತ್ತಾ ಇದ್ದ ರಾಮಪಾಲನು, "ಇಷ್ಟು ಹೇಳುವಾಗ ನಿನ್ನ ಹೆಸರೇನೆಂದು ಹೇಳಲೇ ಇಲ್ಲ. ನನ್ನ ಹೆಸರು ರಾಮ ಪಾಲ; ನಿನ್ನ ಹೆಸರು?" ಎಂದು ಕೇಳಿದ.

"ನನ್ನ ಹೆಸರು ಸಾಗರ ಕುಮಾರ." ಎಂದು ಅವನು ತನ್ನ ಕಥೆಯನ್ನು ಮುಂದುವರಿಸತೊಡಗಿದ.

"ನಮ್ಮ ಆಸ್ಥಾನದಲ್ಲಿ ಒಬ್ಬ ವಿಷಶಾಸ್ತ್ರ ನಿಪುಣ ನಿದ್ದಾನೆ. ನಮ್ಮ ದೇಶದಲ್ಲಿ ಹಾವು ಕಡಿಯುವುದ ರಿಂದ ಸಾಯುವವರು ಜಾಸ್ತಿ. ಆದುದರಿಂದ ನಮ್ಮ ತಂದೆ ಆ ವಿಷ ವೈದ್ಯನನ್ನು ಆಸ್ಥಾನದಲ್ಲಿರಿಸಿದ್ದರು. ಆ ವೈದ್ಯ ಶ್ರೇಷ್ಠನು ಒಂದುಸಾರಿ ನನಗೊಂದು ಮೂಲಿಕೆಯನ್ನು ತೋರಿಸಿ ಅದರ ಕಾಯಿಗಳನ್ನು ಅನ್ನದೊಂದಿಗೆ ಜಗಿದು ನುಂಗಿದರೆ, ಮನುಷ್ಯನು ಎರಡು ದಿನಗಳವರೆಗೆ ಶವದ ಹಾಗೆಯೇ ಇರುವ ನೆಂದು ಹೇಳಿದ. ಆಕಸ್ಮಿಕವಾಗಿ ಮಹಾರಾಜನ ಉದ್ಯಾನದಲ್ಲಿ ಆ ಮೂಲಿಕೆಯ ಗಿಡವೊಂದು ಬೆಳೆ ದಿತ್ತು. ಅದರಲ್ಲಿದ್ದ ಕಾಯಿಯನ್ನು ಕೊಯಿದು ಆದಿತ್ಯವಾರ ಬೆಳಿಗ್ಗೆ ಅನ್ನದೊಂದಿಗೆ ತಿಂದುಬಿಟ್ಟೆ. ಆಮೇಲೆ ಏನಾಯಿತೆಂಬುದೊಂದೂ ನನಗೆ ನೆನಪಿಲ್ಲ. ಎಲ್ಲವನ್ನೂ ಮರೆತೆ, ಇವತ್ತು ಯಾವ ವಾರ?"

"ಇವತ್ತು ಸೋಮವಾರ" ಎಂದು ರಾಮಪಾಲ ನೆನಪು ಮಾಡಿದ. "ಸರಿ. ನನಗೆ ಮತ್ತೆ ಜೀವ ಚೇತರಿಸಿತು ನೋಡಿದೆಯಾ? ನಾನೀಗ ಎಂದಿನಂತೆ ಇದ್ದೇನೆ. ಇದು ಸುಡುಗಾಡುತಾನೆ? ರಾಣಿ ಹೇಳಿ ದಂತೆಯೇ ನನ್ನನ್ನು ಇಲ್ಲಿ ಹೂಳಿಸಿದ್ದಾಳೆ. ಇಲ್ಲಿಗೆ ಈ ಹೊತ್ತಿನಲ್ಲಿ ನೀನು ಹೇಗೆ ಬಂದೆ? ಇದೂ ದೇವರ ದಯೆ ಅನ್ನು ಮಿತ್ರನೇ, ಏನು ನಿನ್ನ ಕಥೆ?" ಎಂದು ಸಾಗರಕುಮಾರನು ಕೇಳಿದ. ರಾಮಪಾಲನು ತನ್ನ ವೃತ್ತಾಂತವನ್ನು ಸಂಕ್ಷಿಪ್ತವಾಗಿ ಅವನಿಗೆ ಹೇಳಿದ.

ಸಾಗರಕುಮಾರನ ಕಥೆಯನ್ನು ಕೇಳಿದ ಮೇಲೆ ಆ ರಾಜಕುಮಾರಿ ತನ್ನನ್ನು ಮದುವೆಯಾಗಲು ಬಂದವರನ್ನು ಇಂದ್ರಜಾಲದ ಯುಕ್ತಿಯಿಂದ ಮೋಸಪಡಿಸಿ ಸೋಲಿಸುವಳೆಂದು ರಾಮಪಾಲನಿಗೆ ಸ್ಪಷ್ಟವಾಯಿತು. ರಾಮಪಾಲನ ಆಪ್ತಮಿತ್ರನೊಬ್ಬ ಇಂದ್ರಜಾಲ ಮಾಡುವುದರಲ್ಲಿ ಗಟ್ಟಿಗನಾಗಿದ್ದ. ಅವ ನಿಂದ ರಾಮಪಾಲನು ಸುಲಭವಾದ ಕೆಲವು ಇಂದ್ರ ಜಾಲ ವಿದ್ಯೆಗಳನ್ನು ಕಲಿತಿದ್ದ. ಆದುದರಿಂದ ರಾಜ ಕುಮಾರಿ ಪ್ರಯೋಗ ಮಾಡಿದ ಇಂದ್ರಜಾಲ ಎಂತಹು ದೆಂಬುದನ್ನು ತಿಳಿದುಕೊಂಡು ಅದೇ ಇಂದ್ರಜಾಲ ದಿಂದ ಅವಳನ್ನು ಸೋಲಿಸಬೇಕೆಂದು ನಿಶ್ಚಯಿಸಿದ.





ರಾಮಪಾಲನು ತಾನು ಮಾಡಬೇಕೆಂದಿರುವ ಉಪಾಯವನ್ನು ಸಾಗರಕುಮಾರನೊಂದಿಗೆ ಹೇಳಿದನು. ಅದಕ್ಕೆ ಅವನು, "ಹೌದು, ನೀನು ನಿನ್ನ ಉಪಾಯದಿಂದ ಅವಳನ್ನು ಗೆದ್ದುಬಿಟ್ಟರೆ' ಅವಳು ಚಿತ್ತ ಶುದ್ಧಿಯಿಂದ ತನ್ನ ಸೋಲನ್ನು ಒಪ್ಪಿಕೊಳ್ಳುವಳೆಂದು ಹೇಗೆ ನಂಬುವುದು ? ಸೋತು ಹೋದರೂ ಅವಳು ನಿನ್ನನ್ನು ಸೆರೆಮನೆಯಲ್ಲಿ ಹಾಕಿಸಿದರೆ ಏನು ಮಾಡುತ್ತೀ ?" ಎಂದು ಕೇಳಿದ.

"ಆಗ ನೀನು ನಿನ್ನ ತಂದೆಯನ್ನು ಒಪ್ಪಿಸಿ ಸೇನೆಯೊಂದಿಗೆ ಬಂದು ನನ್ನನ್ನು ಬಿಡಿಸಬೇಕಾದೀತು. ನೀನು ಮನಸ್ಸು ಮಾಡಿದರೆ ಆ ಕೆಲಸ ಸಾಧ್ಯವಾದೀತು. ಅಷ್ಟು ಸಹಾಯ ಮಾಡಬಲ್ಲೆಯಾ ?" ಎಂದು ರಾಮಪಾಲ ಕೇಳಿದ.

"ಮಾಡುತ್ತೇನೆ. ಹಾಗೆಯೇ ಮಾಡು. ಪ್ರಮಾಣಪೂರ್ವಕವಾಗಿ ನಿನ್ನನ್ನು ಯುದ್ಧ ಮಾಡಿಯಾದರೂ ಬಿಡಿಸಿಕೊಳ್ಳುತ್ತೇನೆ. ನಿನ್ನ ಗತಿ ಏನಾಗುವುದೆಂದು ನೋಡಲು ನಾನು ವೇಷ ಮರೆಸಿಕೊಂಡು ನಗರದೊಳಗೇ ಇರುತ್ತೇನೆ. ನಮ್ಮ ರಾಜ್ಯ ಕೂಡಾ ಸಮೀಪದಲ್ಲೇ ಇದೆ. ನೀನೇನೂ ಹೆದರಬೇಕಾಗಿಲ್ಲ. ಆ ಗರ್ವಿಷ್ಠಳನ್ನು ಸೋಲಿಸಲೇಬೇಕು." ಎಂದು ಧೈರ್ಯ ಕೊಟ್ಟ ಸಾಗರಕುಮಾರ.

ಮಾರನೇದಿನ ನಗರ ದ್ವಾರಗಳು ತೆರೆದ ಕೂಡಲೇ ರಾಮಪಾಲನೂ ಸಾಗರಕುಮಾರನೂ ದಾರೀಹೋಕರ ಹಾಗೆ ನಗರದೊಳಗೆ ಪ್ರವೇಶಿಸಿದರು.

ಸಾಗರಕುಮಾರನು ತಲೆ ಬೋಳಿಸಿಕೊಂಡು, ರಾಮಪಾಲನಿಂದ ಎರಡು ಬಟ್ಟೆಗಳನ್ನು ಪಡೆದು ತನ್ನ ರೂಪವನ್ನು ಬದಲಾಯಿಸಿಕೊಂಡ. ತಾನು ಅವಳ ಆಶೆಯನ್ನು ಬಿಟ್ಟಿರುವುದಾಗಿಯೂ ತನ್ನಿಂದ ಸೇವೆ ಮಾಡಿಸಿಕೊಂಡವಳನ್ನು ತಾನು ಮದುವೆಯಾಗಲಾರೆನೆಂದೂ ಸಾಗರಕುಮಾರನು ಖಂಡಿತವಾಗಿ ಹೇಳಿಬಿಟ್ಟಿದ್ದ.

ಆಮೇಲೆ ರಾಮಪಾಲನು ಒಂದು ಬೊಂಬೆಯ ಅಂಗಡಿಗೆ ಹೋಗಿ ಚಿಕ್ಕದೊಂದು ಕರಡಿಗೆಯನ್ನು ಕೊಂಡುಕೊಂಡು, ಅದರೊಳಗೆ ಒಂದು ನಾಣ್ಯವನ್ನು ಹಾಕಿ, ಅದನ್ನು ತನ್ನ ಎಡಗೈಯ ಮಣಿಕಟ್ಟಿಗೆ ತುಸು ಮೇಲು ಭಾಗದಲ್ಲಿ ಕಟ್ಟಿಕೊಂಡು ಅಂಗಿಯನ್ನು ಅದರ ಮೇಲೆ ಎಳೆದುಕೊಂಡ. ಅವನು ಈಗ ಎಡದ ಕೈಯನ್ನು ಆಡಿಸಿದರೆ ಧ್ವನಿ ಬರುತ್ತಿದ್ದಿತು.

ಹೀಗೆ ಸಿದ್ಧನಾದ ರಾಮಪಾಲನು ರಾಜಕುಮಾರಿಯ ಬಳಿಗೆ ಹೋಗಿ ಅವಳನ್ನು ಮದುವೆಯಾಗುವ ಇಷ್ಟದಿಂದ ಪಂದ್ಯಕ್ಕೆ ಸಿದ್ಧನಾಗಿ ಬಂದಿರುವೆನೆಂದು ತಿಳಿಸಿದ. "ನನ್ನನ್ನು ಮದುವೆಯಾಗಬೇಕಾದರೆ ನಾನಿಡುವ ಪರೀಕ್ಷೆಯಲ್ಲಿ ಗೆಲ್ಲಬೇಕು, ಗೊತ್ತಿದೆ ತಾನೆ ?" ಎಂದಳು ರಾಜಕುಮಾರಿ.

ಯಾವ ಷರತ್ತಿಗಾದರೂ ತಾನು ಸಿದ್ಧನಾಗಿರುವೆನೆಂದು ರಾಮಪಾಲನು ಹೇಳಿದ. ಸೋತರೆ ಅವನು ಜನ್ಮಪೂರಾ ತನ್ನ ಸೇವಕನಾಗಿರಬೇಕೆಂದು ಅವಳು

ಎಚ್ಚರಿಕೆಕೊಟ್ಟಳು. "ನನ್ನದೊಂದು ಸಣ್ಣ ಬೇಡಿಕೆ. ದಯಮಾಡಿ ನನ್ನನ್ನು ನಿಮ್ಮ ದೇವಾಲಯಕ್ಕೆ ಕರೆದುಕೊಂಡು ಹೋಗಿರಿ. ನಾನು ಸೋತರೆ ನಿಮಗೆ ದಾಸಾನುದಾಸನಾಗಿರುವೆನೆಂದು ದೇವರ ಎದುರಿನಲ್ಲಿ ಪ್ರಮಾಣ ಮಾಡುತ್ತೇನೆ. ನಾನು ಗೆದ್ದರೆ ನೀವು ನನ್ನನ್ನು ಮದುವೆಯಾಗುವುದಾಗಿಯೂ ನಿಯಮ ಭಂಗ ಮಾಡುವುದಿಲ್ಲವೆಂದೂ ಪ್ರಮಾಣ ಮಾಡಿದರೆ ನನಗೆ ಧೈರ್ಯ ಬರುತ್ತದೆ." ಎಂದ ರಾಮಪಾಲ.

ತಾನು ಸೋಲುವೆನೆಂಬ ಸಂದೇಹವೇ ರಾಜಕುಮಾರಿಯಲ್ಲಿಲ್ಲದುದರಿಂದ ಅವಳು ಅದಕ್ಕೆ ಒಪ್ಪಿ, ಅವನನ್ನು ದೇವಾಲಯಕ್ಕೆ ಕರೆದುಕೊಂಡು ಹೋದಳು. ಅರ್ಚಕರ ಸಮಕ್ಷಮದಲ್ಲಿ ಇಬ್ಬರೂ ಪ್ರಮಾಣಗಳನ್ನು ಮಾಡಿದರು. ಪರೀಕ್ಷೆ ಕೂಡಾ ದೇವಾಲಯದಲ್ಲಿಯೇ ನಡೆಯಿತು.

ಅವಳು ಪೆಟ್ಟಿಗೆಗಳನ್ನು ಹಾಕಿದ ಪಾತ್ರದೊಳಗೆ ರಾಮಪಾಲನು ತನ್ನ ಎಡದ ಕೈಯನ್ನು ಹಾಕಿ ಒಂದು ಪೆಟ್ಟಿಗೆ ತೆಗೆದು ಆಡಿಸಿದ. ಅದು ಧ್ವನಿ ಮಾಡಿದುದರಿಂದ, ರಾಜಕುಮಾರಿ ಬೆಕ್ಕಸಬೆರಗಾಗಿ ನಿಂತಳು.

"ರಾಜಕುಮಾರೀ, ನಾನು ಗೆದ್ದೆ. ನಿನ್ನ ಮಾತು ನಡೆಯಲಿ" ಎಂದ ರಾಮಪಾಲ. ರಾಜಕುಮಾರಿ ತಲೆಬಗ್ಗಿಸಿ ತನ್ನ ಅಂಗೀಕಾರವನ್ನು ಸೂಚಿಸಿದಳು. ರಾಮಪಾಲನು ತನ್ನ ಬಲಗೈಯನ್ನು ಪಾತ್ರದೊಳಗೆ ಹೊಗಿಸಿ ಎರಡನೇ ಪೆಟ್ಟಿಗೆಯನ್ನೂ ತೆಗೆದು ಆಡಿಸಿದ. ನಿಜಕ್ಕೂ ಎರಡರೊಳಗೂ ಏನೂ ಇರಲಿಲ್ಲ. ಅವನು ರಾಜಕುಮಾರಿಯ ಎಡಗೈಯ ಮೇಲಿನ ರವಕೆಯ ಕೈಯನ್ನು ಎತ್ತಿದಾಗ, ಅವಳು ಮಣಿಕಟ್ಟಿನ ಮೇಲೆ ಕಟ್ಟಿಕೊಂಡಿದ್ದ ಪುಟ್ಟ ಕರಡಿಗೆಯೊಳಗೆ ಒಂದು ನಾಣ್ಯವಿತ್ತು. ಅವಳ ಗುಟ್ಟು ರಟ್ಟಾದ ಕೂಡಲೇ ರಾಮಪಾಲನು "ನೀನು ಹೀಗೆ ಮೋಸದಿಂದ ಎಲ್ಲರನ್ನೂ ಮೋಸಪಡಿಸಿದುದರಿಂದ, ದೇವರು ನಿನ್ನನ್ನು ವಂಚಿಸಿ ರಾಜನಲ್ಲದ ಸಾಮಾನ್ಯ ವರ್ತಕನ ಮಗನಾದ ನನ್ನೊಂದಿಗೆ ನೀನು ಬಾಳುವಂತೆ ಮಾಡಿದ" ಎಂದನು.

"ಇದಕ್ಕೆ ನಾನು ಕಾರಣಳಲ್ಲ; ನನ್ನ ತಂದೆಯ ಆಜ್ಞೆ ಹಾಗಿತ್ತು. ಈ ಪಂದ್ಯದಲ್ಲಿ ಗೆಲ್ಲುವಂತಹ ಬುದ್ಧಿವಂತನನ್ನು ನಿರ್ಣಯಿಸಲು ನನ್ನ ತಂದೆ ಸಾಯುವ ಮೊದಲು ನನಗೆ ಈ ಉಪಾಯ ತಿಳಿಸಿದರು. ದೇವರೇ ನಿಮ್ಮಂತಹ ಬುದ್ಧಿವಂತನನ್ನು ಕಳಿಸಿರಬೇಕು. ಇದರಿಂದ ನನ್ನ ತಂದೆಯ ಆತ್ಮ ಸಂತೋಷಿಸುತ್ತದೆ. ಇಷ್ಟು ಕಾಲ ನನ್ನ ಸೇವಕರಾಗಿದ್ದವರನ್ನೆಲ್ಲಾ ಈಗಲೇ ಬಿಡುಗಡೆ ಮಾಡುತ್ತೇನೆ. ಅವರೆಲ್ಲಾ ನಮ್ಮ ವಿವಾಹ ಮಹೋತ್ಸವದಲ್ಲಿ ಬಹುಮಾನ ಪಡೆಯುತ್ತಾರೆ. ಎಲ್ಲರಿಂದಲೂ ಕ್ಷಮೆ ಕೇಳಿಕೊಳ್ಳುತ್ತೇನೆ" ಎಂದಳು ರಾಜಕುಮಾರಿ.



## ೧೫೭. ಬಹುಕಷ್ಟವಾದ ನೌಕಾ ಮಾರ್ಗ

ಸ್ವೀಡನ್ ದೇಶದ ನೈಋತಿ ತೀರದಲ್ಲಿರುವ ಈ ನೌಕಾ ಮಾರ್ಗವು ಪರ್ವತಗಳು ಬಳಸಿದ ಸಣ್ಣ ಸಣ್ಣ ದ್ವೀಪಗಳ ನಡುವಿನಲ್ಲಿದೆ. ಈ ದ್ವೀಪಗಳಲ್ಲಿ ಅನಾದಿಕಾಲದಿಂದ ಮನುಷ್ಯರು ವಾಸಿಸುತ್ತಿದ್ದರು. ಐದುಸಾವಿರ ವರ್ಷಗಳ ಹಿಂದಿನ ಸಮಾಧಿಗಳಿವೆ. ಕ್ರಿ. ಪೂ. ಸಾವಿರವರ್ಷಗಳ ಹಿಂದಿನ ಶಿಲಾಲೇಖಗಳೂ ಶಿಲ್ಪ ಚಿತ್ರಗಳೂ ಇಲ್ಲಿವೆ. ಚಿತ್ರಗಳಲ್ಲಿ ಮನುಷ್ಯರು, ಮೃಗಗಳು, ಆಯುಧಗಳು, ನೌಕೆಗಳು ಕಾಣುತ್ತವೆ. ಈಗಲೂ ಇಲ್ಲಿಯ ಗುಡ್ಡಗಳಲ್ಲಿ ಹಳ್ಳಿಗಾಡು ಗ್ರಾಮಗಳಿವೆ.





# ಅಕ್ಬರ್‌ಲೋಟ, ಜಹಂಗೀರ್‌ಹಂಡೆ

ಒಂದು ಊರಿನಲ್ಲಿ ಸಲೀಂ ಎಂಬ ಬಡ ಯುವಕ ನಿದ್ದ. ಚಿಕ್ಕವನಾಗಿರುವಾಗಲೇ ಅವನ ತಂದೆ ತೀರಿ ಹೋದುದರಿಂದ ಅವನು ತಾಯಿಯ ಆಶ್ರಯದಲ್ಲೇ ಬೆಳೆದು ದೊಡ್ಡವನಾಗಿದ್ದ. ಪ್ರಾಯಪ್ರಭುದ್ಧನಾದ ಮೇಲೆ, ಒಬ್ಬ ವರ್ತಕನ ಬಳಿಯಲ್ಲಿ ಕೆಲಸಕ್ಕೆ ಸೇರಿ ಕೊಂಡು ಒಂದಿಷ್ಟು ಸಂಪಾದಿಸಲೂ ತೊಡಗಿದ್ದ, ಮಗನು ಇಷ್ಟೊಂದು ದಾರಿಗೆ ಹತ್ತಿದ ಮೇಲೆ. ತಾಯಿ ಅವನ ಈಡಿಗೆ ಜೋಡಿಯಾದ ಜಹೀದಾ ಳೊಂದಿಗೆ ಮದುವೆ ಮಾಡಿದರು.

ಸಲೀಂ ಹೀಗೆ ಸಂಸಾರಿಗನಾದ ಮೇಲೆ ಅವನಿ ಗೇನೂ ಹಣ ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಅವನ ಯಜಮಾನ ಕೊಡುವ ಸಂಬಳವು ತಿಂಡಿ ಬಟ್ಟೆ ಗಳಿಗೆ ಮಾತ್ರ ಸರಿಯಾಗುತಿತ್ತು. ಅದರ ಮೇಲೆ ಸಲೀಂನ ಹೆಂಡತಿ ಜಹೀದಾಳಿಗೆ ಜರತಾರೀ ಬಟ್ಟೆಗಳ ಮೇಲೆ, ಮುತ್ತು, ರತ್ನ ಮೊದಲಾದ ಬೆಲೆ ಬಾಳುವ ಆಭರಣಗಳ ಮೇಲೆ ಮೋಹ ಜಾಸ್ತಿ. ತನ್ನ ಗಂಡನ ಸಂಪಾದನೆ ತಿಳಿದು ಕೂಡಾ ತನಗೆ ಬೇಕಾದ ಬಟ್ಟೆ ಗಳನ್ನೂ ಒಡವೆಗಳನ್ನೂ ಹೇಗಾದರೂ ತರಬೇಕೆಂದು ಅವಳು ಸಲೀಂನೊಡನೆ ಹೋರಾಡುತ್ತಿದ್ದಳು.

ಒಂದುದಿನ ಸಲೀಂ ನಮಾಜು ಮಾಡಿ ಎದ್ದ ಮೇಲೆ ಮಾಳಿಗೆಯ ಮೇಲಿನ ಜಗಲಿಯಲ್ಲಿ ಕುಳಿತು ಕೊಂಡು, ಒಂದು ದೊಡ್ಡ ಲೋಟೆಯಲ್ಲಿ ಹಾಲು ಕುಡಿಯುತ್ತಿದ್ದ.

ಆ ಸಮಯದಲ್ಲಿ ಅವನು ತನ್ನ ಹೆಂಡತಿಯ ಕೋರಿಕೆಗಳನ್ನು ನೆನೆಯುತ್ತ ಅದಕ್ಕೆಲ್ಲಾ ಹಣಕ್ಕೇನು ಮಾಡಬೇಕೆಂದು ದೀರ್ಘವಾಗಿ ಆಲೋಚನೆ ಮಾಡು ತಿದ್ದ. ಹಾಗಿರುವಾಗ ಒಂದು ನೊಣವನ್ನು ತಪ್ಪಿಸಿ ಕೊಳ್ಳುವ ಅವಸರದಲ್ಲಿ ಹಾಲಿನ ಲೋಟಾ ಕೈತಪ್ಪಿ ಕೆಳಗೆ ಬಿದ್ದುಹೋಯಿತು.

ಸಲೀಂ ವಾಸಿಸುವ ಆ ಮನೆಯ ಕೆಳಭಾದದಲ್ಲಿ ಒಂದು ಅಂಗಡಿಯಿತ್ತು. ಆ ಅಂಗಡಿಯ ಮುಂದೆ ಒಬ್ಬ ಬಿಳಿಯ ದೊರೆ ನಿಂತುಕೊಂಡು ಅಂಗಡಿಯ ಯಜಮಾನನೊಂದಿಗೆ ಏನೋ ಕೇಳುತ್ತಿದ್ದ. ಸಲೀಂನ ಕೈಯಿಂದ ಜಾರಿದ ಲೋಟ ಸರಿಯಾಗಿ ಆ ದೊರೆಯ ಟೋಪಿಯ ಮೇಲೆ ಬಿದ್ದಿತು. ಟೋಪಿ ದಪ್ಪವಾಗಿದ್ದುದರಿಂದ ದೊರೆಯ ತಲೆಗೆ ದೊಡ್ಡ ಪೆಟ್ಟೇನೂ ಆಗದಿದ್ದರೂ ಅವನಿಗೆ ಕೋಪ ಬಂದಿತು. ಅವನ ಪರವಾಗಿ ಅಂಗಡಿಯ ಯಜಮಾನನು ಸಲೀಂ

ಸಿ. ಆರ್. ಶಾಸ್ತ್ರಿ

ನನ್ನು ನಿಂದಿಸಿ ದೊಡ್ಡ ಸ್ವರದಿಂದ ಮಾತಾಡಿದ. ಇಷ್ಟಾಗುವಷ್ಟರಲ್ಲಿ ಅಂಗಡಿಯ ಮುಂದೆ ಜನರು ಗುಂಪುಗೂಡಿಬಿಟ್ಟರು. ಗುಂಪಿನಲ್ಲಿದ್ದವನೊಬ್ಬ ಆ ಲೋಟವನ್ನು ಎತ್ತಿಕೊಂಡು ಅಚೀಚೆ ತಿರುಗಿಸಿ ಪರಿಶೀಲಿಸುತ್ತ, ಅತ್ಯಾಶ್ಚರ್ಯದಿಂದ ಕಣ್ಣಗಲಿಸಿ, "ಆಹ! ಇದು ಅಕ್ಬರ್ ಚಕ್ರವರ್ತಿಯ ಲೋಟ! ಇದನ್ನು ನಾನು ನೂರು ರೂಪಾಯಿಗೆ ಕೊಂಡುಕೊಳ್ಳುತ್ತೇನೆ" ಎಂದು ಸಲೀಂನೊಂದಿಗೆ ಹೇಳಿದ.

ಆ ಮಾತು ಕೇಳಿ ದೊರೆ, ತನಗೆ ನಡೆದ ಅಪಚಾರವನ್ನು ಮರೆತು, ತಾನು ಆ ಲೋಟಕ್ಕೆ ನೂರೈವತ್ತು ರೂಪಾಯಿ ಕೊಡುವುದಾಗಿ ಹೇಳಿದ. ಮೊದಲಿನವನಿಗೂ ದೊರೆಗೂ ಸ್ಪರ್ಧೆ ಬಿತ್ತು. ಲೋಟದ ಮೌಲ್ಯ ಏರಿತು. ಕಡೆಗೆ ದೊರೆ ಏಳುನೂರು ರೂಪಾಯಿಗಳಿಗೆ ಆ ಲೋಟವನ್ನು ಕೊಂಡುಕೊಂಡನು.

ಆಗ ಸಲೀಂನ ತಾತನಿಗೆ ಮಿತ್ರನಾದ ಹಣ್ಣು ಮುದುಕ ಸಾಹೇಬನೊಬ್ಬ ಇದನ್ನೆಲ್ಲಾ ನೋಡುತ್ತಿದ್ದು ಅಲ್ಲಿ ಸೇರಿದವರೊಂದಿಗೆ, "ನಮ್ಮ ಸಲೀಂನ ಕುಟುಂಬ ಈಗ ಸಾಮಾನ್ಯ ದಶೆಗೆ ಇಳಿದಿದ್ದರೂ, ಒಂದು ಕಾಲದಲ್ಲಿ ಮೊಗಲಾಯಿ ರಾಜವಂಶದೊಂದಿಗೆ ತುಂಬ ಸನ್ನಿಹಿತವಾಗಿದ್ದಿತು. ಇವನ ಮನೆಯಲ್ಲಿರುವ ದೊಡ್ಡ ಹಂಡೆ ಜಹಂಗೀರ್ ಬಾದಶಹನದು" ಎಂದನು. ಆ ಮಾತು ಕೇಳಿದ ಕೂಡಲೇ ದೊರೆಗೆ ಚರಿತ್ರ ಪ್ರಸಿದ್ಧವಾದ ಜಹಂಗೀರನ ಹಂಡೆಯನ್ನು ಕೂಡಾ ಕೊಂಡುಕೊಳ್ಳಬೇಕೆಂದು ತೋರಿತು. ಆತನಿಗೆ ಪ್ರಾಚೀನವಾದ, ಚರಿತ್ರ ಪ್ರಸಿದ್ಧಿಯಿರುವ ವಸ್ತುಗಳನ್ನು ಕೊಂಡುಕೊಳ್ಳುವುದರಲ್ಲಿ ಒಂದು ಪ್ರತ್ಯೇಕ ಮೋಜು. ಅವನು ತನ್ನ ಅಭಿಲಾಷೆ ತಿಳಿಸಿದ ಕೂಡಲೇ ಸಲೀಂ ಹಂಡೆಯನ್ನು ದೊರೆಗೆ ಮಾರಲು ಒಪ್ಪಿ, ಎರಡು ಸಾವಿರ ರೂಪಾಯಿ ಬೆಲೆ ಪಡೆದುಕೊಂಡು ಅದನ್ನು ಕೊಟ್ಟುಬಿಟ್ಟನು.

ತಾನು ಅಮೂಲ್ಯವಾದ ಪ್ರಾಚೀನ ವಸ್ತುಗಳನ್ನು ಬಹಳ ಸುಲಭಕ್ಕೆ ಕೊಂಡುಕೊಂಡೆನೆಂದು ದೊರೆ ತೃಪ್ತಿಪಟ್ಟನು. ಹೀಗೆ ಸಲೀಂನ ಹಣದ ಸಮಸ್ಯೆ ಅಂದಿಗೆ ತೀರಿತು.

ಆ ಹಣವನ್ನು ಬಟ್ಟೆಗಳಿಗೂ ನಗಗಳಿಗೂ ಖರ್ಚು ಮಾಡಿಬಿಡುವುದು ಯೋಗ್ಯವಲ್ಲ ಎಂದು ಅವನಿಗೆ ತೋರಿತು. ಅದನ್ನು ಮೂಲಧನವಾಗಿ ಉಪಯೋಗಿಸಿ ವ್ಯಾಪಾರ ಮಾಡುತ್ತ, ಮುಂದೆ ಹಣ ಸೇರಿದಾಗ ಬೇಕಾದುದನ್ನೆಲ್ಲಾ ಕೊಂಡುಕೊಳ್ಳಬಹುದೆಂದು ಹೆಂಡತಿಗೆ ಹೇಳಿ ಒಪ್ಪಿಸಿದನು.

ಅದರಂತೆ ಅವನು ಸ್ವಂತ ವ್ಯಾಪಾರ ಪ್ರಾರಂಭಿಸಿ ಬೇಗದಲ್ಲೇ ಆ ಊರಿನಲ್ಲಿ ದೊಡ್ಡ ವರ್ತಕನೆನಿಸಿದನು. ಜಹೀದಾಳ ಕೋರಿಕೆಗಳೆಲ್ಲ ಈಗ ಅನಾಯಾಸವಾಗಿ ತೀರತೊಡಗಿದುವು.





# ತೇಯಲಾಗದ ಕೊರಡು

ಒಂದು ಊರಿನಲ್ಲಿ ಒಬ್ಬ ಹುಡುಗ ಸಣ್ಣ ಪ್ರಾಯದಿಂದಲೇ ಖಾರದವನಾಗಿ ಬೆಳೆಯತೊಡಗಿದ. ಅಂದರೆ ಅವನಿಗೆ ಯಾರ ಲಕ್ಷ್ಯವೂ ಇಲ್ಲ. ತನ್ನಿಚ್ಛೆಯಂತೆಯೇ ಮಾಡುವನು. ಅದಕ್ಕೆ ಸರಿಯಾಗಿ ಅವನ ದೇಹಕ್ಕೆ ಒಳ್ಳೆಯ ಬಲವೂ ಕೂಡಿತ್ತು. ದೊಡ್ಡವನಾದ ಹಾಗೆ ಅವನನ್ನು ನೋಡಿ ಎಲ್ಲರೂ ಹೆದರತೊಡಗಿದರು. ಅವನಿಗೆ ಘಾಟೀಖಾರನೆಂದೇ ಹೆಸರು ಬಿದ್ದಿತ್ತು.

ಅವನ ಲೂಟಿ ಕಾಟ ದೂರು ಪೇರುಗಳನ್ನು ಕೇಳಲಾಗದೆ, ತಮ್ಮ ಮೇಲೆ ಬರುವ ಕೆಟ್ಟ ಹೆಸರನ್ನು ತಾಳಲಾಗದೆ ತಂದೆತಾಯಿಗಳು ಉಪಾಯವಾಗಿ ಅವನನ್ನು ಮನೆಯಿಂದ ಹೊರಗೆ ಕಳುಹಿಸಿಬಿಟ್ಟರು.

ಘಾಟೀಖಾರನು ಸ್ವಲ್ಪ ದಿನಗಳವರೆಗೆ ಕಂಡ ಕಂಡಲ್ಲಿ ತಿರುಗಾಡಿ, ಕಡೆಗೆ ಇಬ್ಬರು ಕಳ್ಳರೊಡನೆ ಸ್ನೇಹ ಮಾಡಿಕೊಂಡನು. ಇಂಥವನ ಸ್ನೇಹ ತಮಗೂ ಲಾಭವೆಂಧು ಕಳ್ಳರಿಗೆ ತೋರಿತ್ತು. ಒಂದುದಿನ ಕಳ್ಳರು ಅವನನ್ನು ಕರೆದುಕೊಂಡು ಕಳ್ಳತನಕ್ಕೆ ಹೋಗಿ, ಮೂವರೂ ಕೂಡಿ ಒಂದು ಮನೆಯೊಳಗೆ ಪ್ರವೇಶಿಸಿದರು. ಕಳ್ಳತನದ ಕಾರ್ಯ ಮುಗಿದ ಮೇಲೆ, ಇನ್ನು ಘಾಟೀಖಾರನಿಗೂ ಕದ್ದ ಸೊತ್ತಿನಲ್ಲಿ ಭಾಗ ಕೊಡಬೇಕಾಗುವುದೆಂದುಕೊಂಡು ಕಳ್ಳರಿಬ್ಬರೂ ಅವನಿಗೆ ಮೋಸಮಾಡಿ ತಪ್ಪಿಸಿಕೊಂಡು ಹೋಗಲು ನೋಡಿದರು. ಅದನ್ನು ತಿಳಿದ ಕೂಡಲೇ ಘಾಟೀಖಾರನು ಒಂದು ಡಬ್ಬಾವನ್ನು ಬಡಬಡನೆ ಬಾರಿಸಿ "ಕಳ್ಳರು ಕಳ್ಳರು!" ಎಂದು ಕೂಗಿದ. ಕೂಡಲೇ ಮನೆಯವರೂ ಇತರರೂ ಓಡಿಬಂದು ಘಾಟೀಖಾರನನ್ನೇ ಕಳ್ಳನೆಂಧು ಹಿಡಿದು, ಅವನನ್ನು ರಾಜನ ಬಳಿಗೆ ಎಳೆದುಕೊಂಡು ಹೊರಟರು.

ಅವರು ಹೋಗುವ ದಾರಿಯಲ್ಲಿ ಒಬ್ಬ ರೈತನು ಎರಡು ಕೊಬ್ಬಿದ ಎತ್ತುಗಳೊಡನೆ ಒದ್ದಾಡುತ್ತ, "ಯಾವನಾದರೂ ಒಂದೇ ಗುದ್ದಿಗೆ ನಿಮ್ಮನ್ನು ಕೊಂದರೆ ಒಳ್ಳೇದಿತ್ತು!" ಎಂದ ಗಟ್ಟಿಯಾಗಿ.

ಕೂಡಲೇ ಘಾಟೀಖಾರನು ಹಾರಿ ಹೋಗಿ ಒಂದೊಂದು ಗುದ್ದಿನಿಂದ ಆ ಎರಡು ಎತ್ತುಗಳನ್ನೂ ಕೊಂದುಬಿಟ್ಟನು. ಇದನ್ನು ನೋಡಿ ರೈತನು ಕೋಪದಿಂದ ಉರಿದು ಬೀಳುತ್ತ, ಘಾಟೀಖಾರನನ್ನು ಹಗ್ಗದಿಂದ ಕಟ್ಟಿ ಎತ್ತಿನ ಹಾಗೆ ದುಡಿಸಿ, ತನಗಾದ ನಷ್ಟಕ್ಕೆ ಈಡುಮಾಡಿಸಿಕೊಳ್ಳದೆ ಬಿಡಲಾರೆನೆನ್ನುತ್ತ, ಅವನ

ಎನ್. ರಾಮಕೃಷ್ಣ

ಮೇಲೆ ದೂರು ಕೊಡಲು ತಾನು ಕೂಡಾ ರಾಜನ ಬಳಿಗೆ ಹೊರಟನು. ಸ್ವಲ್ಪ ದೂರ ಹೋಗುತ್ತಿರಲು, ಒಬ್ಬಳು ಮುದುಕಿ ಬೀದಿಯ ಬದಿಯಲ್ಲಿ ಬಾಳೇ ಹಣ್ಣುಗಳನ್ನು ಮಾರುತ್ತ, "ಪೈಸೆಗೊಂದು ಹಣ್ಣು ಕೊಂಡು ತಿಂದುಬಿಡಿ! ತಿಂದ ಮೇಲೆ ತಲೆಗೆ ಕುಟ್ಟಿ ಹೋಗಿಬಿಡಿ!" ಎಂದು ರಾಗರಾಗವಾಗಿ ಕೂಗಿಕೂಗಿ ಹಾಡುತ್ತಿದ್ದಳು.

ಘಾಟೀಖಾರನು ಆ ಮುದುಕಿಗೆ ಒಂದುಪೈಸೆ ಕೊಟ್ಟು ಹಣ್ಣು ತಿಂದು, ಅವಳ ನಡುನೆತ್ತಿಯ ಮೇಲೆ ಮುಷ್ಟಿಯ ಹಿಮ್ಮಡದಿಂದ ಬಲವಾಗಿ ಮೊಟ್ಟೇಕಾಯಿ ಕೊಟ್ಟನು. ಆದರ ನೋವಿನಿಂದ ಮುದುಕಿಯ ಕಣ್ಣು ಗುಡ್ಡುಗಳೇ ಕಿತ್ತು ಬರುವಂತಾಯಿತು. ಘಾಟೀಖಾರನ ಮೇಲೆ ತಾನು ಕೂಡಾ ದೂರು ಕೊಡಲು ಅವರೊಂದಿಗೆ ಹೊರಟಳು.

ಹೀಗೆ ಮೂವರೂ ಕೂಡಿ ಘಾಟೀಖಾರನನ್ನು ರಾಜನ ಬಳಿಗೆ ಕರೆದುಕೊಂಡು ಹೋದರು. ಘಾಟೀಖಾರನು ಯಾವ ಚಿಂತೆಯೂ ಇಲ್ಲದೆ ಬಹಳ ಉತ್ಸಾಹದಿಂದ ಏನೋ ತಮಾಷೆ ನೋಡುವವನಂತೆ ನಿಂತಿದ್ದ. ರಾಜನು ಒಬ್ಬೊಬ್ಬ ಫಿರ್ಯಾದಿಯನ್ನೂ ಕರೆದು ಅವರ ದೂರುಗಳನ್ನು ಕೇಳಿದ ಮೇಲೆ, ಮೊದಲನೇ ಫಿರ್ಯಾದನ್ನು ಕುರಿತು ಘಾಟೀಖಾರನನ್ನು ನೋಡಿ, "ನೀನು ಇವರ ಮನೆಯೊಳಗೆ ಹೊಕ್ಕು ಕಳ್ಳತನ ಮಾಡಿದೆಯೋ ಇಲ್ಲವೋ? ನಿಜ ಹೇಳು" ಎಂದು ಪ್ರಶ್ನೆ ಮಾಡಿದ.

"ಕಳ್ಳತನ! ನಾನು ಮಾಗಿದೆನೆ? ಕಳ್ಳತನ ಮಾಡುವವನು ಡಬ್ಬಾ ಹೊಡೆದು ಶಬ್ದ ಮಾಡುತ್ತಾನೆಯೇ ಸ್ವಾಮಿ? ನನಗೆ ಸ್ವಲ್ಪ ಅವಲಕ್ಕಿ ಬೇಕಾಯಿತು. ಆದಕ್ಕಾಗಿ ಇವರ ಮನೆಗೆ ಹೋದೆ. ಅಷ್ಟರಲ್ಲೇ ಹೀಗೆಲ್ಲಾ ಆಯಿತು. ಎಲ್ಲಾ ಈ ಜನಗಳೇ ಮಾಡಿದರು." ಎಂದ ಘಾಟೀಖಾರ.

"ನೂರುವರಾಹ ಬೆಲೆ ಬಾಳುವ ಮಾತು ಹೇಳಿದೆ" ಎಂದ ಮಂತ್ರಿ ಉತ್ಸಾಹದಿಂದ.

ಎತ್ತುಗಳನ್ನು ಗುದ್ದಿ ಕೊಂದುದನ್ನು ಕುರಿತು ಕೇಳಿದಾಗ ಘಾಟೀಖಾರನು, "ಆದರಲ್ಲಿ ನಾನೇನು ತಪ್ಪು



ಮಾಡಿದೆ? ಈ ರೈತ ತನ್ನ ಎತ್ತುಗಳನ್ನು ಒಂದು ಗುದ್ದಿಗೆ ಕೊಲ್ಲುವವರು ಇಲ್ಲವೆಂದು ಚಿಂತೆಯಲ್ಲಿರುವಾಗ, ನಾನು ಆ ಕೆಲಸ ಮಾಡಿ ಅವನ ಚಿಂತೆ ತೀರಿಸಿದೆ ಅಷ್ಟೇ" ಎಂದ.

"ಭೇಷ್! ಸಾವಿರವರಾಹ ಬೆಲೆ ಬಾಳುವ ಮಾತಿದು" ಎಂದ ಮಂತ್ರಿ ತಲೆ ದೂಗುತ್ತ.

"ಈ ಮುದುಕಿ ಪಾಪ, ಯಾವ ಕೆಲಸ ಹೇಳಿದಳೋ ಅದನ್ನೇ ಮಾಡಿದೆ. ಹಣ್ಣಿನ ಬೆಲೆಗೇ ವೊಟ್ಟೇ ಕಾಯಿ ಕೂಡಾ ಸೇರಿದ್ದೆಂದು ತಿಳಿದು ಅದನ್ನೂ ಕೊಟ್ಟೆ. ಅದು ಪ್ರತ್ಯೇಕ ಅಂತ ನನಗೆ ಹೇಗೆ ಗೊತ್ತಾಗಬೇಕು?" ಎಂದು ಮೂರನೇ ಆರೋಪಣೆಗೆ ಸಮಾಧಾನ ಹೇಳಿದ ಘಾಟೀಖಾರ.

"ಲಕ್ಷ ವರಹ ಬೆಲೆ ಬಾಳುವ ಮಾತು!" ಎಂದ ಮಂತ್ರಿ. ಇಷ್ಟಾದ ಮೇಲೆ ಅವನಿಗೆ ಶಿಕ್ಷೆ ಎಲ್ಲಿ ಬಂತು? ರಾಜನು ಅವನ ಮೇಲಿನ ಫಿರ್ಯಾದುಗಳನ್ನು ಹೊಡೆದು ಹಾಕಿ ಬಿಡುಗಡೆ ಮಾಡಿಸಿದನು. ದೂರು ತಂದವರೆಲ್ಲ ಯಾವ ಲಾಭವೂ ಇಲ್ಲದೆ, ಮುಖ ತಗ್ಗಿಸಿಕೊಂಡು ಹೊರಟುಹೋದರು. ಆದರೆ ಘಾಟೀಖಾರನು ಸುಮ್ಮನೆ ಹೋಗುವುದನ್ನು ಬಿಟ್ಟು ಮಂತ್ರಿಯ ಕಡೆಗೆ ತಿರುಗಿ, "ಮಾತು ಅಂದರೆ ಮಾತು. ಎಲ್ಲಿ? ನನ್ನ ಮಾತಿನ ಬೆಲೆ ಕೊಟ್ಟುಬಿಡಿ ಮತ್ತೆ?" ಎಂದು ಕೇಳಿದ.

ನಿಜವೇ. ಮಂತ್ರಿ ಘಾಟೀಖಾರನಿಗೆ ನೂರು, ಸಾವಿರ, ಲಕ್ಷ ವರಾಹಗಳಿಗೆ ಬಾಕೀದಾರನಾಗಿದ್ದ. ರಾಜನು ಘಾಟೀಖಾರನಿಗೆ ಆ ಧನವನ್ನೆಲ್ಲ ಕೊಡಿಸಿಬಿಟ್ಟ. ಆದರೆ ಘಾಟೀಖಾರನು ಹಾಗೆಲ್ಲ ಹೊರಟು ಹೋಗುವ ಘಟವೇ ಅಲ್ಲ. ಅವನು ನೆಟ್ಟಗೆ ಮಂತ್ರಿಯ ಮನೆಗೆ ಹೋಗಿ, ಎದುರು ಬಾಗಿಲಿಗೆ ಅಡ್ಡವಾಗಿ ನಿಂತು, ಒಳ್ಳೇ ದರ್ಪದಿಂದ, "ನನಗೆ ಯಾರಾದರೂ ಒಳ್ಳೆಯ ಸುಖಕರವಾದ ಭೋಜನ ಹಾಕಿದರೆ ಲಕ್ಷಕ್ಕೂ ಮಿಕ್ಕಿದ ಈ ಹಣವನ್ನೆಲ್ಲಾ ಕೊಟ್ಟುಬಿಡುತ್ತೇನೆ" ಎಂದು ಕೂಗಿ ಹೇಳಿದ.

ಮಂತ್ರಿಗೆ ಸುಂದರಿಯಾದ ಮಗಳಿದ್ದಳು. ಅವಳಿಗೆ ಅಚ್ಚುಮೆಚ್ಚಿನವಳಾದ ಒಬ್ಬಳು ಸಖಿಯೂ ಇದ್ದಳು.



ಆ ಇಷ್ಟ ಸಖಿ ಘಾಟೀಖಾರನ ಹಣದ ಗಂಟು ತನ್ನ ಒಡತಿಗೇ ದಕ್ಕಬೇಕೆಂಬ ಉದ್ದೇಶದಿಂದ, ಒಳಗೆ ಓಡಿದಳು. ಘಾಟೀಖಾರನನ್ನು ಕರೆದು ತಂದು, ಉಪಚಾರ ಮಾಡಿ ಊಟ ಬಡಿಸುವಂತೆ ಮಂತ್ರಿ ಕುಮಾರಿಗೆ ಪ್ರೇರೇಪಣೆ ಮಾಡಿದಳು ಆ ಇಷ್ಟ ಸಖಿ.

ಮಂತ್ರಿಕುಮಾರಿ ಸಂತೋಷದಿಂದ ಎದ್ದು ಬಂದು, ಘಾಟೀಖಾರನನ್ನು ಒಳಕ್ಕೆ ಆಹ್ವಾನಿಸಿ ವಿಶ್ರಾಂತಿ ತೆಗೆದುಕೊಳ್ಳುವಂತೆ ಸುಪ್ಪತ್ತಿಗೆಯ ಆಸನದಲ್ಲಿ ಕೂಡಿಸಿ, ಒಳ್ಳೊಳ್ಳೆಯ ಭಕ್ಷ್ಯಭೋಜ್ಯಗಳನ್ನು ತರಿಸಿ ತಾನೇ ಸ್ವತಃ ಅವನಿಗೆ ಬಡಿಸಿ ಭೋಜನ ಮಾಡಿಸಿ ತಾಂಬೂಲ ಕೊಟ್ಟಳು.

ಘಾಟೀಖಾರನು ತನ್ನಲ್ಲಿದ್ದ ಹಣ ಪೂರಾ ಮಂತ್ರಿ ಕುಮಾರಿಗೆ ಕೊಟ್ಟು ನೆಟ್ಟಗೆ ರಾಜನ ದರ್ಬಾರಿಗೆ ಹೋಗಿ, "ಮಹಾರಾಜರೆ, ಒಂದು ಸಣ್ಣ ಸಂದೇಹ ಇದೆ, ಕೇಳಲೆ?" ಎನ್ನಲು, ರಾಜನು ಮಂದಹಾಸ ದಿಂದ, "ಕೇಳು" ಎಂದ.

"ಒಬ್ಬನನ್ನು ಆದರಿಸಿ ಪೀಠವಿತ್ತು ಕೂಡಿಸುವುದು ಯಾರು? ಕೈಕಾಲಿಗೆ ನೀರು ಎರೆದು, ಸ್ವಂತವಾಗಿ ಬಡಿಸಿ ಭೋಜನ ಮಾಡಿಸುವವರು ಯಾರು? ಅವನ ಹಣವನ್ನೆಲ್ಲಾ ತೆಗೆದು ಜಾಗರೂಕತೆಯಿಂದ ನೋಡಿ ಕೊಳ್ಳುವವರು ಯಾರು?" ಎಂದು ಘಾಟೀಖಾರನು ರಾಜನನ್ನು ಕೇಳಿದ.

"ಮತ್ತೆ ಯಾರು? ಅವನ ಹೆಂಡತಿಯೇ! ಏಕೆ ಹೀಗೆ ಕೇಳುವೆ?" ಎಂದು ರಾಜನು ಕೇಳಿದ.

ಘಾಟೀಖಾರನು ನಗಾಡುತ್ತ—"ಏಕೆ ಕೇಳಿದೆ ನೆಂದು ಮಂತ್ರಿಯವರ ಕುಮಾರಿಯನ್ನು ಕರೆಯಿಸಿ ಕೇಳಿರಿ. ಎಲ್ಲಾ ತಿಳಿಯುತ್ತದೆ" ಎಂದನು.

ರಾಜನಿಗೆ ಎಲ್ಲಾ ಸಮಾಚಾರವೂ ತಿಳಿಯಿತು. ಮಂತ್ರಿ ನಡೆದ ಸಂಗತಿಯನ್ನು ಅರಿತು ಕೋಪದಿಂದ ಉರಿಯತೊಡಗಿದ. ತನ್ನ ಮಗಳು ಹಣದ ಆಶೆ ಯಿಂದ ಈ ತೇಯಲಾಗದ ಕೊರಡನಿಗೆ ಉಪಚಾರ ಮಾಡಿ ಸಿಕ್ಕಿಬಿದ್ದಳೆಂದು ಅವನಿಗೆ ಅರ್ಥವಾಯಿತು. ಆಗ ರಾಜನು ಮಂತ್ರಿಗೆ ಸಮಾಧಾನ ಮಾಡುತ್ತ, "ವಿಜಯ ನಿಯಮವೇ ಹೀಗಿದೆಯಯ್ಯಾ, ಹುಡುಗ ಚುರುಕಾಗಿದ್ದಾನೆ. ಭಯವರಿಯದ ಗಂಡುಗಲಿಬೇರೆ. ನಿಮ್ಮ ಮಗಳಿಗೆ ತಕ್ಕ ವರನನ್ನೇ ವಿಧಿ ನಿರ್ಣಯಿಸಿ ದ್ದಾನೆ. ಘನ ಸಂತೋಷದಿಂದ ಜೋರಾಗಿ ಮದುವೆ ಮಾಡಿಸಿಬಿಡಿ ಇಬ್ಬರಿಗೂ," ಎಂದು ಹೇಳಿದನು. ಮಂತ್ರಿಯ ಕೋಪ ತಣ್ಣಗಾಯಿತು.

ಘಾಟೀಖಾರನು ಮಂತ್ರಿಕುಮಾರಿಯನ್ನು ಮದುವೆಮಾಡಿಕೊಂಡ ಮೇಲೆ ಅವನ ಉದ್ಧಟತನದ ಆಟಗಳಿಗೆ ಆಸ್ಪದ ಸಿಗಲಿಲ್ಲ. ರಾಜನ ದರ್ಬಾರಿನಲ್ಲಿ ಅವನಿಗೆ ಉಪಮಂತ್ರಿ ಪದವಿ ದೊರೆಯಿತು. ಗೌರ ವದ ಜೀವನ ನಡೆಸಿಕೊಂಡು ಸುಖವಾಗಿದ್ದ.






ಅನೇಕ ವರ್ಷಗಳ ಹಿಂದೆ ಒಂದು ದೇಶದಲ್ಲಿ ಒಬ್ಬ ರಾಜನಿದ್ದ. ಅವನು ತನ್ನ ಆಸ್ಥಾನದಲ್ಲಿ ಚಂಡಭಟ್ಟನೆಂಬ ಒಬ್ಬ ಗಾರುಡೀಗಾರನಿಗೂ ಒಂದು ಸ್ಥಾನವನ್ನು ಕೊಟ್ಟಿದ್ದ. ಆದುದರಿಂದ ಆ ಗಾರುಡೀಗಾರನಿಗೆ ಊರೊಳಗೆ ಕೂಡ ಒಳ್ಳೆಯ ಪ್ರಸಿದ್ಧಿಯೂ ಗೌರವವೂ ಇತ್ತು. ಅವನು ಆಗಾಗ ಸಣ್ಣ ಸಣ್ಣ ಗಾರುಡೀ ವಿದ್ಯೆಗಳನ್ನು ತೋರಿಸಿ, ಪ್ರಜೆಗಳನ್ನು ಆಶ್ಚರ್ಯ ಪಡಿಸಿ ಸಂತೋಷ ಪಡಿಸುತ್ತಿದ್ದ. ಆದುದರಿಂದ ಪ್ರಜೆಗಳಿಂದ ಲಾಭಗಳಿಸಲಿಕ್ಕಾಗಿ ಅವನು ತಾನು ಮಾಂತ್ರಿಕನೆಂದು ಹೇಳಿ, ಅನೇಕ ಮಂತ್ರ ತಂತ್ರಗಳನ್ನು ಮಾಡಿ ಮೋಸಪಡಿಸಿ ದಕ್ಷಿಣೆ ಗಿಟ್ಟಿಸಿಕೊಳ್ಳುವನು. ಚಂಡಭಟ್ಟನು ಮಾಡುವ ಮೋಸಗಳಲ್ಲಿ ಮತ್ತೊಬ್ಬ ಆಸ್ಥಾನ ಉದ್ಯೋಗಸ್ಥನೂ ಸಹಾಯ ಮಾಡುತ್ತಿದ್ದ. ಅವನಿಗೂ ಚಂಡಭಟ್ಟನ ಲಾಭದಲ್ಲಿ ಭಾಗ ಸಿಗುತಿತ್ತು.

ಹೀಗೆ ಒಂದುದಿನ ಗ್ರಹಣ ಸ್ನಾನಮಾಡಲಿಕ್ಕಾಗಿ ರಾಣಿ ನದಿಯಕಡೆಗೆ ಹೋಗಿ, ತನ್ನ ನಗನಟ್ಟುಗಳನ್ನು ನದಿಯ ತೀರದಲ್ಲಿಟ್ಟು ನದಿಯಲ್ಲಿಳಿದಳು. ಆ ಸಮಯದಲ್ಲಿ ಅಲ್ಲಿ ಪರಿಚಾರಿಕೆಯರ ಹೊರತು ಬೇರೆ ಯಾರೂ ಇರಲಿಲ್ಲ. ರಾಣಿ ಸ್ನಾನ ಮಾಡಿ ಮೇಲೆ ಬಂದು ನೋಡಿದಾಗ, ಬೆಲೆ ಬಾಳುವ ಹಾರವೊಂದು ಕಾಣಲಿಲ್ಲ. ಅಲ್ಲಿರುವ ರಾಣಿಯ ಪರಿಚಾರಿಕೆಯರೆಲ್ಲ ಅವಳ ತಾಯಿಯ ಮನೆಯಿಂದ ಬಂದ ನಂಬಿಕಸ್ಥರೇ.

ರಾಣಿ ಮನೆಗೆ ಹಿಂದಿರುಗಿದ ಮೇಲೆ ರಾಜನೊಂದಿಗೆ ನಡೆದ ಸಂಗತಿಯನ್ನೆಲ್ಲ ಹೇಳಿದಳು. ರಾಜನು ಕೂಡಲೇ ಚಂಡಭಟ್ಟನನ್ನು ಕರೆಯಿಸಿ, ಹಾರ ಕದ್ದ ಕಳ್ಳನನ್ನು ಕಂಡು ಹಿಡಿಯಬೇಕೆಂದು ಆಜ್ಞೆಮಾಡಿದನು. ಚಂಡಭಟ್ಟ ನಕ್ಕು "ಅದಕ್ಕೇನು ಮಹಾಪ್ರಭುಗಳೇ, ತುಂಬ ಸುಲಭ. ನಾಳೆ ಇದೇ ಹೊತ್ತಿಗೆ ಕಳ್ಳನನ್ನು ಹಾರದೊಂದಿಗೆ ಹಿಡಿದು ಕೊಡುವ ಭಾರ ನನ್ನದು. ಚಿಂತೆ ಬಿಡಿ" ಎಂದು ಹೇಳಿ ತನ್ನ ಮನೆಗೆ ಹೋದನು.

ಚಂಡಭಟ್ಟನು ಮನೆಗೆ ಹೋದ ಸ್ವಲ್ಪ ಹೊತ್ತಿನಲ್ಲಿ ಮಾಲಿನಿ ಎಂಬ ಪರಿಚಾರಿಕೆ ಓಡುತ್ತಾ ಅವನ ಬಳಿಗೆ ಬಂದು, ಚಂಡಭಟ್ಟನ ಕಾಲಿನ ಮೇಲೆ ಬಿದ್ದು, "ಅಯ್ಯಾ, ನನ್ನನ್ನು ಕಾಪಾಡಬೇಕು. ನನ್ನ ಬುದ್ಧಿ ಮಣ್ಣು ತಿಂದು ಮಹಾರಾಣಿಯ ಹಾರವನ್ನು ಕದ್ದೆ. ಇದು ನಿಮ್ಮವರೆಗೂ ಬರುತ್ತದೆಂದು ನನಗೆ ತೋರಲಿಲ್ಲ. ನಾಳೆ ನೀವು ನಿಮ್ಮ ಮಂತ್ರ ಶಕ್ತಿಯಿಂದ

ವಿ. ಜಿ. ರಾಮು

ನನ್ನನ್ನು ಕಳ್ಳಿ ಎಂದು ಹಿಡಿದುಬಿಟ್ಟರೆ ನನ್ನ ಗತಿ ಏನಾದೀತು ? ದಯವಿಟ್ಟು ನನ್ನನ್ನು ಕಾಪಾಡಿ. ಈ ಹಾರವನ್ನು ನೀವೇ ತೆಗೆದುಕೊಂಡು ಯಾವುದೋ ಒಂದು ವಿಧದಲ್ಲಿ ರಾಣಿಯವರಿಗೆ ಸಿಗುವ ಹಾಗೆ ಮಾಡಬೇಕು. ನನ್ನ ಹೆಸರನ್ನು ಮಾತ್ರ ಹೇಳಬೇಡಿ'' ಎಂದು ದೀನಳಾಗಿ ಪ್ರಾರ್ಥಿಸುತ್ತ ಹಾರವನ್ನು ಅವನ ಕೈಗೆ ಕೊಟ್ಟಳು.

ಚಂಡಭಟ್ಟನು ಮಾಲಿನಿಯೊಂದಿಗೆ "ಹೆದರ ಬೇಡ. ನೀನು ನನ್ನ ಬಳಿಗೆ ಬಂದುದನ್ನು ಮಾತ್ರ ಯಾರ ಹತ್ತಿರವೂ ಹೇಳಬೇಡ. ಅದು ನಿನಗೇ ಅಪಾಯ.'' ಎಂದು ಹೇಳಿ ಸಮಾಧಾನಪಡಿಸಿ ಅವಳನ್ನು ಕಳುಹಿಸಿಬಿಟ್ಟನು.

ಆ ಹಾರವನ್ನು ತಾನೇ ಒಳಗೆ ಹಾಕಿಕೊಳ್ಳಬೇಕೆಂದು ಚಂಡಭಟ್ಟನಿಗೆ ದುರ್ಬುದ್ಧಿ ಹುಟ್ಟಿತು. ಅದಕ್ಕಾಗಿ ಅವನು ಒಂದು ಚಿಕ್ಕ ಗಾರುಡೀ ಮಾಡಿದನು. ಒಂದು ಕಾಗದದ ಮೇಲೆ ನೀರುಳ್ಳಿಯ ರಸದಿಂದ "ಹಾರವು ನದಿಯಲ್ಲಿ ಹೊಡೆದುಕೊಂಡು ಹೋಯಿತು'' ಎಂದು ಬರೆದು, ರಾಜಸಭೆಗೆ ಬಂದನು. ಆ ಕಾಗದವನ್ನು ಎಲ್ಲರ ಮುಂದೆ ತೋರಿಸಿ, ಎಲ್ಲರ ಸಮಕ್ಷಮದಲ್ಲಿ ಆ ಖಾಲೀ ಕಾಗದಕ್ಕೆ ಧೂಪ ಹಾಕಿದನು. ಆಗ ಅದರಲ್ಲಿ ಅಕ್ಷರಗಳು ಕಾಣಿಸಿದುವು. ರಾಣಿಯ ಹಾರವನ್ನು ಯಾರೂ ಕದಿಯಲಿಲ್ಲವೆಂದೂ, ಅದು ನದಿಯಲ್ಲಿ ಹೊಡೆದು ಕೊಂಡು ಹೋಯಿತೆಂದೂ, ಚಂಡಭಟ್ಟನ ಮಂತ್ರದಿಂದ ಗೊತ್ತಾಯಿತೆಂದು ಎಲ್ಲರೂ ನಂಬಿದರು.

ಮರುದಿನ ಚಂಡಭಟ್ಟನು ತನ್ನ ಮಿತ್ರನಾದ ಆಸ್ಥಾನದ ಉದ್ಯೋಗಸ್ಥನನ್ನು ಕರೆದುಕೊಂಡು ಒಬ್ಬ ಸ್ವರ್ಣಕಾರನಬಳಿಗೆ ಹೋಗಿ, ಹಾರವನ್ನು ಅವನಿಗೆ ತೋರಿಸಿ, ಅದನ್ನು ಮಾರಾಟ ಮಾಡಿಸಿಕೊಡಲು ಹೇಳಿದನು. ಸರಿಯಾಗಿ ಅದೇ ಸಮಯದಲ್ಲಿ ಮಾಲಿನಿ ರಾಜಭಟರೊಂದಿಗೆ ಅಲ್ಲಿಗೆ ಬಂದಳು. ರಾಜಭಟರು ಚಂಡಭಟ್ಟನನ್ನೂ, ಅವನ ಜತೆಯಲ್ಲಿದ್ದವನನ್ನೂ ಹಿಡಿದು ಆಸ್ಥಾನಕ್ಕೆ ಎಳೆದೊಯ್ದರು.

ಮಾಲಿನಿ ತುಂಬಿದ ಸಭೆಯಲ್ಲಿ ರಾಜನೊಂದಿಗೆ, "ಮಹಾಪ್ರಭುಗಳೇ, ಈ ಚಂಡಭಟ್ಟ ಶುದ್ಧ ಮೋಸಗಾರ. ಈ ಸಂಗತಿ ನನಗೆ ಗೊತ್ತಾದಂದಿನಿಂದ ಇವನನ್ನು ಹೇಗೆ ಹಿಡಿಯಬೇಕೆಂದು ನಾನು ಆಲೋಚಿಸಿ ಕೊಂಡಿದ್ದೆ. ಕಡೆಗೆ ರಾಣಿಯವರ ಹಾರ ಕಳವಾದ ನೆವನದಲ್ಲಿ ಇವನ ಬಣ್ಣಬಯಲಿಗೆ ತರಲು ಸಾಧ್ಯವಾಯಿತು.'' ಎಂದು ನಡೆದುದನ್ನೆಲ್ಲಾ ವಿವರಿಸಿದಳು.

ರಾಜನು ಅವಳಿಗೆ ದೊಡ್ಡ ಬಹುಮಾನವನ್ನು ಕೊಟ್ಟು, ಚಂಡಭಟ್ಟನನ್ನೂ, ಅವನ ಅನುಚರನಾದ ಆಸ್ಥಾನದ ಉದ್ಯೋಗಿಯನ್ನೂ ದೇಶಭ್ರಷ್ಟ ಮಾಡಿಸಿದನು.






ರಿಪೂಣಾಂ ಧರ್ಷಣಂ ಶೂರಾ
ಮರ್ಷಯಂತಿ ನ ಸಂಯುಗೇ
ಜಾನನ್ತಸ್ತು ಸ್ವಕಂ ವೀರ್ಯಂ
ಸ್ತ್ರೀ ಸಮಕ್ಷಂ ವಿಶೇಷತಃ. ೧

ಶೂರರು ಯುದ್ಧದಲ್ಲಿ ಶತ್ರುಗಳ ತಿರಸ್ಕಾರವನ್ನು ಸಹಿಸಲಾರರು. ಅದರಲ್ಲಿಯೂ ಶತ್ರುಗಳಿಗಿಂತ ತಮ್ಮ ಬಲವು ಹೆಚ್ಚೆಂದು ತಿಳಿದವರು, ವಿಶೇಷವಾಗಿ ಸ್ತ್ರೀಯರ ಮುಂದೆ ಎಂದೂ ಸಹಿಸರು.

ಅಧರ್ಷಿತಾಣಾಂ ಶೂರಾಣಾಂ
ಸಮರೇಷ್ವನುವರ್ತಿನಾಂ
ಧರ್ಷಣಾಮರ್ಷಣಂ (ಭೀರು)
ಮರಣಾದತಿರಿಚ್ಯತೇ. ೨

ಯುದ್ಧದಲ್ಲಿ ಹಿಂಜರಿಯದ ವೀರರಿಗೆ ಯಾರಾದರೂ ಇದಿರಿಸಿದಾಗ ಸಹಿಸಿ ಸುಮ್ಮನಿರುವುದು ಮರಣಕ್ಕಿಂತಲೂ ಹೆಚ್ಚಿನದು.

ಶೂರಾಣಾಂ ಹಿ ಮನುಷ್ಯಾಣಾಂ
ತ್ವದ್ವಿಧಾನಂ ಮಹಾತ್ಮನಾಂ
ವಿನಷ್ಟೇ ವಾ ಪ್ರಣಷ್ಟೇ ವಾ
ಶೋಕಸ್ಸರ್ವಾರ್ಥ ನಾಶನಃ ೩

ಶೂರರೂ ಮಹಾತ್ಮರೂ ಆದವರು ಕಾಣದಿರುವುದನ್ನಾಗಲೀ, ನಾಶವಾದುದನ್ನಾಗಲೀ ಕುರಿತು ಆಲೋಚಿಸುವುದು ಎಲ್ಲಾ ವಿಧದಲ್ಲೂ ಕೇಡು. —ವಾಲ್ಮೀಕಿ.

ಶೂರರು

Photo by S. B. Takalkar



ಬಹುಮಾನ
ಪಡೆದ ಶೀರ್ಷಿಕೆ

ಅಕ್ಕನ ನಗೆ ಮೊಗ್ಗು

ಕಳುಹಿಸಿದವರು
ಗುರುನಾಥ್

Photo by K. K. Rao



ಕುಶಲಕೈಗಾರಿಕಾ ಶಿಕ್ಷಣಾಲಯ
ನಾಗಮಂಗಲ, ಮಂಡ್ಯ.

ತಂಗಿಗೆ ಬಲು ಹಿಗ್ಗು

ಬಹುಮಾನ
ಪಡೆದ ಶೀರ್ಷಿಕೆ

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೦







★ ಮೇಲಿನ ಫೋಟೋಗಳಿಗೆ ಶೀರ್ಷಿಕೆಗಳು ಫೆಬ್ರುವರಿ ೧೫ ರೊಳಗೆ ತಲಪಬೇಕು.

★ ಶೀರ್ಷಿಕೆಗಳು ಒಂದಕ್ಕೊಂದು ಸರಿಹೊಂದುವಂತಿರಬೇಕು. ಶೀರ್ಷಿಕೆಗಳನ್ನು ಕಾರ್ಡಿನಲ್ಲೇ ಬರೆಯಬೇಕು. ಗೆದ್ದ ಶೀರ್ಷಿಕೆಗಳು ಏಪ್ರಿಲ್ '೭೫ ರ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.

# ಚಂದಮಾಮ

## ಈ ಸಂಚಿಕೆಯಲ್ಲಿರುವ ಕಥೆಗಳು:



ಎರಡನೇ ಹೊದಿಕೆಯ ಚಿತ್ರ:
ಸಂಸಿದ್ಧತೆ

ಮೂರನೇ ಹೊದಿಕೆಯ ಚಿತ್ರ:
ಪ್ರದರ್ಶನ


Printed by B. V. REDDI at The Prasad Process Private Ltd., and Published by B. VISWANATHA REDDI for Chandamama Publications, 2 & 3, Arcot Road, Madras-600026. Controlling Editor : 'CHAKRAPANI'





# ಅಪ್ಪಿಮಕ್ಕಳ ಕಥೆ

Feb 1975

೭

[ರಾತ್ರಿಯಲ್ಲಿ ಒಂದು ಮರದ ಮೇಲೆ ಉದಯನನೂ ಸಂಧ್ಯಾನೂ ನಿದ್ರೆ ಮಾಡುತ್ತಿದ್ದಾಗ, ಮಾರುದ್ದ ಗಡ್ಡದ ಗೇಣುದ್ದದ ಮನುಷ್ಯನೊಬ್ಬ ಅವರನ್ನು ಬಂಧಿಸಿ ತನ್ನ ಮನೆಗೆ ಕರೆದೊಯ್ದ. ನಿಶೀಥನು ತನ್ನ ಸೋದರರನ್ನು ಹುಡುಕುತ್ತಾ ಹೋಗಿ ಆ ಗಡ್ಡದ ಮಾಂತ್ರಿಕನ ಹಾರ ಮತ್ತು ಭಸ್ಮಗಳ ರಹಸ್ಯಗಳನ್ನು ತಿಳಿದುಕೊಂಡನು.]

ಹಗಲು ಹೊತ್ತು ಸಂಧ್ಯಾ, ನಿಶೀಥರಿಗೆ ಯಾವ ಪ್ರಯೋಜನಕ್ಕೂ ಬಾರದು. ಹಗಲಿನಲ್ಲಿ ಕುರುಡ ಆಗುವಂತಹ ಅವರಿಬ್ಬರನ್ನೂ ಗಡ್ಡದ ಮಾಂತ್ರಿಕ ಅವನೋ ಬೂದಿ ಚೆಲ್ಲಿ ಮಾಯವಾಗಿ ಹೋಗುವಂತೆ ಮಾಡಿದ್ದಾನೆ. ಆದುದರಿಂದ ಉದಯನನು ಮಂತ್ರದ ಹಾರವನ್ನು ಧರಿಸಿಕೊಂಡು ಗಡ್ಡದ ಗಿಡ್ಡನಾದುದೂ, ಮಂಚದಲ್ಲಿ ಮಲಗಿದ ಗಡ್ಡದವನು ಸಾಧಾರಣ ಮನುಷ್ಯನಾಗಿರುವುದೂ, ಸಂಧ್ಯಾ ನಿಶೀಥರಿಗೆ ತಿಳಿದಿರಲಿಲ್ಲ. ಗಡ್ಡದ ಗಿಡ್ಡ ಮಾಂತ್ರಿಕ ಯಾವ ಕ್ಷಣದಲ್ಲಿ ಏನುಮಾಡುವನೋ ತಮ್ಮ ಸೋದರನ ಗತಿ ಏನಾಗಿದೆಯೋ ಎಂಬ ಚಿಂತೆಯಲ್ಲೇ ಅವರಿಬ್ಬರೂ ಮಾಯವಾಗಿಬಿಟ್ಟಿದ್ದರು.

ಗಡ್ಡದ ಗಿಡ್ಡನ ಅಸಲು ಗುಟ್ಟು ತನಗೆ ತಿಳಿದುದು ಮಾತ್ರವಲ್ಲದೆ, ಅವನನ್ನು ಮೋಸಪಡಿಸಿ ತಾನು ಕೂಡಾ ಅವನಂತೆಯೇ ಆಗಿರುವುದನ್ನು ನೋಡಿ ಉದಯನನಿಗೆ ಒಂದು ಬಗೆಯ ಹಾಸ್ಯಭಾವದ ಸಂತೋಷವಾಗಿತ್ತು. ಈ ಸಂತೋಷದಲ್ಲಿ ಉದಯನನು ತನ್ನ ಸಹೋದರರ ಸಂಗತಿಯನ್ನೇ ಮರೆತುಬಿಟ್ಟನು. ಈಗ ಉದಯನನ ದೃಷ್ಟಿ ಪೂರಾ ತನ್ನ ಜೇಬಿನೊಳಗಿರುವ ಭಸ್ಮಗಳ ಮೇಲಿದ್ದಿತು. ಈ ಬೇರೆ



ಬೇರೆ ಬಣ್ಣದ ಭಸ್ಮಗಳೂ, ಅಂಜನಗಳೂ ಯಾವುದಕ್ಕೆ ಉಪಯೋಗವಾಗುವುದೋ, ಅದನ್ನು ಹೇಗೆ ತಿಳಿಯುವುದೋ ಎಂದು ಆಲೋಚಿಸತೊಡಗಿದನು. ಹೀಗಿರುವಾಗಲೇ ಅವನಿಗೆ ತನ್ನ ಸಹೋದರರ ಜ್ಞಾಪಕ ಬಂತು.

ಅವರೆಲ್ಲಿದ್ದಾರೆ ? ಏನಿದು ? ಆ ಕೋಣೆಯಲ್ಲಿ ಮಲಗಿದ್ದವರು ಎಲ್ಲಿ ಹೋದರು ? ಹೇಗೆ ಹೋದರು ? ಅವನಿಗೆ ಗಾಬರಿಯಾಯಿತು.

ಉದಯನನಿಗೆ ಏನೂ ತೋರದೆ, ಸುಮ್ಮನೆ ಆ ಕೋಣೆಯೊಳಗೇ ಇತ್ತಿಂದತ್ತ ಅತ್ತಿಂದಿತ್ತ ನಡೆದಾಡತೊಡಗಿದ. ಅಷ್ಟರಲ್ಲಿ ಮಲಗಿಕೊಂಡಿದ್ದ ಮಾಂತ್ರಿಕ ಮನುಷ್ಯ ಎದ್ದುಬಿಟ್ಟ.

ಉದಯನನ್ನು ನೋಡಿದ ಕೂಡಲೇ ಅವನಿಗೆ ಭಗೀರೆಂದಿತು. ತಾನು ಹೊಂದಿದ ಅದೇ ಗಿಡ್ಡ ರೂಪದಲ್ಲಿ ಮಾರುದ್ದ ಗಡ್ಡಧಿಂದಿರುವ ಇನ್ನೊಬ್ಬನನ್ನು ನೋಡಿದ ಕೂಡಲೇ ಅವನಿಗೆಲ್ಲವೂ ಅರ್ಥವಾಗಿ ಭಯವಾಯಿತು. ಸ್ವಲ್ಪ ಹೊತ್ತು ಕಣ್ಣು ಮುಚ್ಚಿ ಯೋಚಿಸಿದ. ತನ್ನ ಗುಟ್ಟು ಬಹಿರಂಗವಾಗಿ, ತಾನು ಅವನ ಕೈಯೊಳಗೆ ಸಿಕ್ಕಿ ಬೀಳುವಂತಾಯಿತಲ್ಲಾ ಎಂಬ ಚಿಂತೆಯಿಂದ ಅವನು ಒಳಗೊಳಗೆ ಉರಿಕಾರ ತೊಡಗಿದರೂ, ಹೊರಗೆ ಮಾತ್ರ ಏನೂ ತೋರಿಸದೆ ಮುಗುಳು ನಗುತ್ತ, ಉದಯನನ ಬಳಿಗೆ ಬಂದು "ನಮಸ್ಕಾರ ಮಹಾನುಭಾವರೇ. ನೀವು ಯಾರೋ ತುಂಬ ಪ್ರಭಾವಶಾಲಿಗಳಾಗಿರಬೇಕು. ಇಷ್ಟು ದೀರ್ಘ ಕಾಲವಧಿಯಲ್ಲಿ ನನ್ನ ರಹಸ್ಯಗಳನ್ನು ಕಂಡುಹಿಡಿಯಬಲ್ಲ ಸಮರ್ಥರನ್ನು ಈ ದಿನ ನೋಡಿದೆ. ಇದು ನನ್ನ ಅದೃಷ್ಟದ ದಿನವೆಂದೇ ತಿಳಿಯುತ್ತೇನೆ. ಆದರೆ ಇದರಿಂದ ನಿಮಗೆ ಆಗುವಂತಹ ಲಾಭವೇನೂ ಇಲ್ಲ. ನೀವು ಇಲ್ಲಿಗೆ ಬಂದ ಕೆಲಸವೇನೆಂಬುದನ್ನು ಹೇಳಿದರೆ ನಾನು ಕ್ಷಣಮಾತ್ರದಲ್ಲಿ ಆ ಕಾರ್ಯ ನೆರವೇರಿಸಿ ಕೊಡಬಲ್ಲೆ. ನಾನಿರುವಾಗ ನೀವು ವೃಥಾ ಶ್ರಮಪಡಬೇಕಾಗಿಲ್ಲ. ಏನಾಗಬೇಕೋ ಹೇಳಿಬಿಡಿ" ಎಂದು ಕಪಟ ವಿನಯದಿಂದ ಹೇಳುತ್ತ, ಉದಯನನ ಕೊರಳಿನಲ್ಲಿರುವ ಹಾರವನ್ನು ತೆಗೆಯಲು ನೋಡಿದ. ಎಚ್ಚರಿಕೆಯಲ್ಲಿದ್ದ ಉದಯನ ಹಿಂದಕ್ಕೆ ಸರಿದ. ಹಾರವನ್ನು ತನಗೆ ಕೊಟ್ಟರೆ ಅವನು ಹೇಳಿದ ಕೆಲಸ ಕ್ಷಣದಲ್ಲಿ ನೆರವೇರಿಸುವುದಾಗಿ ಬಹಳ ಚಾತುರ್ಯದ ಮಾತುಗಳನ್ನಾಡಿದ ಆ ಮಾಂತ್ರಿಕ.

ಉದಯನನು ಅಂತಹ ಮಾತುಗಳಿಗೆಲ್ಲ ಜಗ್ಗದೆ, "ಮೊದಲು ನನ್ನ ಸಹೋದರರನ್ನು ಎಲ್ಲಿ ಅಡಗಿಸಿರುವೆಯೋ ಹೇಳು. ಆಮೇಲೆ ಉಳಿದ ಮಾತು" ಎಂದ ಖಂಡಿತವಾಗಿ.

"ಅವರನ್ನು ನಾನೆಲ್ಲಿ ಅಡಗಿಸಿದ್ದೇನೆ ? ಇಲ್ಲಿಯೇ ಇದ್ದಾರಲ್ಲ. ಓಹೊ ! ಕಾಣಿಸುವುದಿಲ್ಲವೆನ್ನುವಿಯಾ ? ನೀನು ಹಾಕಿಕೊಂಡಿರುವ ಅಂಗಿಯ ಎಡಬದಿಯ ಜೇಬಿನಲ್ಲಿ ಕಪ್ಪು ಭಸ್ಮದ ಕರಡಿಗೆಯಿದೆ. ಅದರಿಂದ ಒಂದು ಚಿಟಿಕೆ ಭಸ್ಮ ತೆಗೆದು ಅಲ್ಲಿ ಚೆಲ್ಲು. ಆ

...ಣುವರು" ಎಂದ ಮಾಂತ್ರಿಕ. ಅದರಂತೆ ಅವನು ತೋರಿಸಿದ ಸ್ಥಳದಲ್ಲಿ ಉದಯನನು ಕಪ್ಪು ಪುಡಿಯನ್ನು ಚೆಲ್ಲುತ್ತಲೆ ಒಮ್ಮೆಗೇ ನಿಶೀಥನೂ ಸಂಧ್ಯಾನೂ ಮಲಗಿದಂತೆ ಪ್ರತ್ಯಕ್ಷರಾಗಿ, ಆಗ ತಾನೇ ಆಕಳಿಸುತ್ತ ಎದ್ದು ಕುಳಿತುಕೊಳ್ಳುತ್ತಿದ್ದರು.

"ಸರಿ, ಪರವಾಗಿಲ್ಲ, ಪುಣ್ಯಾತ್ಮ. ಇನ್ನು ನನ್ನ ಕೈ ಎಂದಿನಂತೆ ಬರುವದಾರಿ ಕೂಡಾ ಹೇಳಿಬಿಡು" ಎಂದ ಉದಯನ.

"ಅದರ ಮದ್ದು ಕೂಡಾ ನಿನ್ನ ಜೇಬಿನಲ್ಲೇ ಇದೆ. ಬಲಬದಿಯ ಜೇಬಿನಲ್ಲಿ ಹಸುರು ಬಣ್ಣದ ಅಂಜನದ ಡಬ್ಬಿಯಿದೆ. ಅದನ್ನು ಬೆರಳಿನಿಂದ ಚೂರು ಮಾತ್ರ ತೆಗೆದು ಆ ಮೊಂಡುಕೈಗೆ ತಿಕ್ಕು" ಎಂದ ಮಾಂತ್ರಿಕ.

ಉದಯನನು ಅವನು ಹೇಳಿದಂತೆ ಮಾಡಲು, ಕೈ ಎಂದಿನಂತೆ ಬಂದು ಸರಿಯಾಯಿತು. ಈಗ ಉದಯನಿಗೆ ತನ್ನ ಅಂಗಿಯ ಜೇಬಿನಲ್ಲಿರುವ ಬಿಳಿಯ ಭಸ್ಮ ಕೆಂಪು ಅಂಜನಗಳು ಯಾವುದಕ್ಕೆ ಉಪಯೋಗವಾಗುವುವೆಂದು ತಿಳಿಯಬೇಕೆನಿಸಿತು. ಅವುಗಳನ್ನು ಅವನಿಗೆ ತೋರಿಸುತ್ತ "ಇವುಗಳಿಂದ ಏನಾಗುತ್ತದೆ?" ಎಂದು ಕೇಳಿದ.

"ಓಹ್! ಇಷ್ಟು ಬುದ್ಧಿವಂತನಾಗಿದ್ದು ಅದನ್ನು ಗ್ರಹಿಸಲಾರದೆ ಹೋದೆಯಾ? ನಿನ್ನ ಸೋದರರನ್ನು ಮಾಯಮಾಡಿದ್ದು ಈ ಬಿಳಿಯ ಭಸ್ಮದಿಂದಲೇ. ನಿನ್ನ ಕೈಯನ್ನು ಇಲ್ಲದಂತೆ ಮಾಡಿದ್ದು ಆ ಕೆಂಪು ಅಂಜನದಿಂದ. ಇನ್ನು ಆ ಕೊರಳ ಹಾರ ತೆಗೆದು ಕೊಡಪ್ಪ" ಎಂದು ಕೈನೀಡುತ್ತ ಎಲ್ಲಾ ಮರ್ಮಗಳನ್ನೂ ತಿಳಿಸಿಬಿಟ್ಟನು.

"ಸರಿಸರಿ. ನಾನು ಬುದ್ಧಿವಂತನೆಂದು ನಾನೇನೂ ಹೇಳಿಕೊಳ್ಳಲಿಲ್ಲವಷ್ಟೆ? ನೀನೇ ಹೆಚ್ಚಿನ ಬುದ್ಧಿವಂತನಾಗಿರು. ಹೇಳು ಮತ್ತೆ. ಈ ಕರವಸ್ತ್ರದಲ್ಲಿಯೂ ಏನೋ ಮಹತ್ವವಿರಲೇ ಬೇಕು. ಅದನ್ನೂ ಹೇಳಿಬಿಡು." ಎಂದ ಉದಯನ.



"ನಿಜ. ಅದರಿಂದ ಎರಡು ಉಪಯೋಗಗಳಿವೆ. ನಿಮಗೆ ಬೇಕಾದ ಆಹಾರ ಪದಾರ್ಥಗಳನ್ನು ನೆನೆಸಿಕೊಂಡು ಈ ಕರವಸ್ತ್ರವನ್ನು ಬಿಡಿಸಿಟ್ಟರೆ ಅವೆಲ್ಲವೂ ತಯಾರಾಗಿಬಿಡುತ್ತವೆ. ಮತ್ತು ಎಲ್ಲಾ ವಿಧದ ರೋಗಗಳನ್ನೂ ಇದು ಗುಣಪಡಿಸುತ್ತದೆ. ಆಯಿತಷ್ಟೆ?" ಎಂದ ಮಾಂತ್ರಿಕ.

"ಹಾಗಾದರೆ ನಮ್ಮ ಕಣ್ಣಿನ ದೃಷ್ಟಿ ಭೇದಗಳನ್ನು ಹೋಗಲಾಡಿಸಿ ಎಲ್ಲರ ಕಣ್ಣುಗಳಂತೆ ಮಾಡಬಲ್ಲುದೇ ಈ ಕರವಸ್ತ್ರ?" ಎಂದು ಕೇಳಿದ ಉದಯನ.

"ಹಾಗಂದರೇನು? ಏನಾಗಿದೆ ನಿಮ್ಮ ಕಣ್ಣುಗಳಿಗೆ?" ಎಂದು ಕೇಳಿದ ಮಾಂತ್ರಿಕ. ಉದಯನನು ತಾನು ಕತ್ತಲೆಯಲ್ಲಿ ಕುರುಡನಾಗಿರುವುದನ್ನೂ, ಅದರಂತೆ ತನ್ನ ಸೋದರರಿಗಿರುವ ದೃಷ್ಟಿಯ ಕೊರತೆಗಳನ್ನೂ ವಿವರವಾಗಿ ಹೇಳಿದನು.

ಅದನ್ನೆಲ್ಲ ಕೇಳಿ ಮಾಂತ್ರಿಕನು, "ಓಹೋ! ಹೀಗೋ ಸಮಾಚಾರ? ನೀವು ಮೂವರ ಕಣ್ಣು







ಗಳಿಗೂ ಸರಿಯಾದ ದೃಷ್ಟಿ ಬರುವ ದಾರಿ ತಿಳಿಸುತ್ತೇನೆ. ಮೊದಲು ನನ್ನ ಹಾರವನ್ನು ನನಗೆ ಕೊಟ್ಟುಬಿಡು " ಎಂದನು.

ಉದಯನ ಅದಕ್ಕೆ ಒಪ್ಪಲಿಲ್ಲ. ತಾನು ಸ್ವಲ್ಪ ಮಾತ್ರ ಮೋಸ ಹೋದರೂ ಈ ಸೋತ ಮಾಂತ್ರಿಕ ತಮ್ಮನ್ನು ಸಾಯಿಸದೆ ಬಿಡಲಾರನೆಂದು ಅವನಿಗೆ ಗೊತ್ತು. ಅವನು ಉಪಾಯದಿಂದ, "ಎಲವೋ ಮುದಿ ಮಾಂತ್ರಿಕ ! ಮೊದಲು ನಮಗೆ ಕಣ್ಣು ಸರಿಯಾಗುವ ದಾರಿ ಹೇಳು. ಇದೊಂದೇ ನಮಗಿರುವ ಕೋರಿಕೆ. ನಿನ್ನ ಈ ಹಾರವನ್ನು ನಾನಿಟ್ಟುಕೊಳ್ಳುವುದಿಲ್ಲ. ಈಗಲೇ ನಿನ್ನ ಕೈಗೂ ಕೊಡಲಾರೆ. ಇಲ್ಲಿಂದ ಪಶ್ಚಿಮ ದಿಕ್ಕಿನಲ್ಲಿ ಹತ್ತು ಮೈಲು ದೂರದಲ್ಲಿರುವ ಬಂಡೇಗುಡ್ಡದಲ್ಲಿ ಒಂದು ಗುಹೆಯಿದೆ. ನಿನ್ನ ಈ ಹಾರವನ್ನು ಆ ಗುಹೆಯಲ್ಲಿಟ್ಟು ನಾವು ಹೋಗಿಬಿಡುತ್ತೇವೆ. ಇದು ನಿಜ. ನೀನು ಸ್ವಲ್ಪ ಹೊತ್ತಿನ ಮೇಲೆ ಅಲ್ಲಿಗೆ ಬಂದು ಅದನ್ನು ತೆಗೆದುಕೊಂಡು ಹೋಗು" ಎಂದನು. ಹಾರವು ಆ ಮಾಂತ್ರಿಕನಿಗೆ ಬಹು ಮುಖ್ಯವಾದುದರಿಂದ, ಉದಯನನು ಹೇಳಿದುದಕ್ಕೆಲ್ಲ ಅವನು ಒಪ್ಪದೆ ಬೇರೆ ವಿಧಿಯಿರಲಿಲ್ಲ. ಆಗ ನಿಶೀಥನೂ ಸಂಧ್ಯಾನೂ ಅವರ ಬಳಿಗೆ ಬಂದು. "ಅಣ್ಣಯ್ಯಾ, ಈ ಕಪಟಿಯೊಡನೆ ಆಮೇಲೆ ಮಾತುಕತೆಯಾಡೋಣ. ಹೊಟ್ಟೆಯಲ್ಲಿ ಹಸಿವೆಯೆದ್ದು ಕತ್ತೆಯ ಹಾಗೆ ಹೊರಳಾಡುತ್ತಿದೆ. ಆ ಕರವಸ್ತ್ರದ ಮಹತ್ವವನ್ನು ನೋಡಿಬಿಡುವಾ ಮೊದಲು" ಎಂದರು.

ಈ ಸಂಗತಿ ಉದಯನನಿಗೆ ತಟ್ಟಲೇ ಇಲ್ಲ. ಆಗ ತಾನೇ ಅವನಿಗೂ ತನ್ನ ಹೊಟ್ಟೆ ಚುರ್ರೆನ್ನುತ್ತಿರುವುದು ತಿಳಿಯಿತು. ಕೂಡಲೇ ಅವನು ಕರವಸ್ತ್ರವನ್ನು ಹರಡಿ, ಏನೇನೋ ಭಕ್ಷ್ಯಭೋಜ್ಯ ಫಲಗಳ ಹೆಸರುಗಳನ್ನು ನೆನೆದನು. ನೆನೆದಂತೆ ಅವೆಲ್ಲವೂ ಕರವಸ್ತ್ರದ ಮೇಲೆ ಪ್ರತ್ಯಕ್ಷವಾದುವು.

ಮೂವರು ಸಹೋದರರೂ ತೃಪ್ತಿಯಾಗಿ ತಿಂದು ತೇಗಿದರು. ದುಷ್ಟನಾದರೂ ಆ ಮಾಂತ್ರಿಕನೂ ಮನುಷ್ಯತಾನೇ? ಅವನಿಗೂ ಒಂದಷ್ಟು ಕೊಟ್ಟು ತಿನ್ನಿಸಿದರು.

ಹೊಟ್ಟೆ ತುಂಬಿದ ಮೇಲೆ ಉದಯನನು ಕರವಸ್ತ್ರವನ್ನು ಮಡಚಿ ಜೇಬಿನೊಳಗಿಟ್ಟುಕೊಂಡು. "ಇನ್ನು ನಮ್ಮ ಕಣ್ಣುಗಳು ಸರಿಯಾಗುವ ಕ್ರಮ ಹೇಳು. ಆಮೇಲೆ ನಮ್ಮ ದಾರಿ ಹಿಡಿದು ನಾವು ಹೋಗುತ್ತೇವೆ" ಎಂದನು.

"ನಿನ್ನ ಹತ್ತಿರವಿರುವ ಕೆಂಪು ಅಂಜನವನ್ನು ಉಂಡೆ ಮಾಡು. ಆ ಉಂಡೆಯನ್ನು ಈ ನಾರುದಾರದ ಚೂರುಗಳಿಂದ ಬೆಂಕಿ ಹೊತ್ತಿಸು. ಆಗ ಬ್ರಹ್ಮಾಂಡದಂತಹ ಹೊಗೆ ಬರುತ್ತದೆ. ನೀವು ಮೂವರೂ ಈ ಕರವಸ್ತ್ರವನ್ನು ತಲೆಯ ಮೇಲೆ ಹಾಕಿಕೊಂಡು ಆ ಹೊಗೆ ನಿಮ್ಮ ಕಣ್ಣಿಗೆ ತಾಗುವಂತೆ ನೋಡಿಕೊಳ್ಳಬೇಕು. ಕಣ್ಣುಗಳನ್ನು ಮುಚ್ಚಿಕೊಳ್ಳಬಾರದು.

ಹಾಗೆ ಒಂದು ಐದು ನಿಮಿಷಗಳಾದ ಮೇಲೆ ಬಟ್ಟೆ ಮುಸುಕು ತೆಗೆಯಿರಿ. ನಿಮ್ಮ ಕಣ್ಣುಗಳು ಸರಿಯಾಗುತ್ತವೆ'' ಎಂದ ಮಾಂತ್ರಿಕ.

ಕೂಡಲೇ ಉದಯನನು ಕೆಂಪು ಅಂಜನವನ್ನು ಉಂಡೆ ಮಾಡಿ, ನಾರುದಾರದ ಚೂರುಗಳ ನಡುವೆ ಇಟ್ಟು, ಬೆಂಕಿಗಾಗಿ ಅತ್ತ ಇತ್ತ ನೋಡಿದನು. ಆಗ ಮಾಂತ್ರಿಕನು ಚಕಮುಕಿ ಕಲ್ಲುಗಳನ್ನು ಹೊಡೆದು ಬೆಂಕಿ ಹೊತ್ತಿಸಿ ಕೊಟ್ಟನು. ಉಂಡೆಯ ಸುತ್ತಲಿನ ನಾರುದಾರಗಳಿಗೆ ಬೆಂಕಿ ಹಿಡಿದ ಕೂಡಲೇ ಭಾರಿ ಹೊಗೆ ಎದ್ದಿತು.

ಉದಯನನು ತನ್ನ ಸೋದರರೊಂದಿಗೆ ಆ ಹೊಗೆಯ ನಡುವೆ ಕುಳಿತು, ತಮ್ಮೆಲ್ಲರ ತಲೆಗಳ ಮೇಲೆ ಕರವಸ್ತ್ರ ಹರಡಿಕೊಂಡನು.

ಐದು ನಿಮಿಷಗಳಾದ ಮೇಲೆ ಮೂವರೂ ಅಲ್ಲಿಂದೆದ್ದು ಈಚೆಗೆ ಬಂದರು. ಒಬ್ಬೊಬ್ಬರ ಕಣ್ಣುಗಳಿಂದಲೂ ಧಾರೆಧಾರೆಯಾಗಿ ನೀರಿಳಿಯತೊಡಗಿತು. ಸ್ವಲ್ಪ ಹೊತ್ತಿಗೆ ನೀರಿಳಿಯುವುದು ನಿಂತು, ಕಣ್ಣುಗಳ ದೃಷ್ಟಿಯೂ ಆರಿಹೋಯಿತು.

ಕಡೆಗೆ ಇದೇನಾಗಿ ಹೋಯಿತು? ಸಾಧಾರಣ ದೃಷ್ಟಿ ಶಕ್ತಿ ಬರುವುದರ ಬದಲಾಗಿ, ಮೊದಲಿದ್ದ ದೃಷ್ಟಿ ಪಾಟವ ಕೂಡಾ ಹೊರಟುಹೋಗಿ ಮೂವರೂ ಶುದ್ಧ ಕುರುಡರಾದರು. ಅವರ ಕಣ್ಣು ಗುಡ್ಡುಗಳೇ ಮಾಯವಾಗಿದ್ದುವು.

ಉದಯನನು ಕೋಪದಿಂದ ಹಲ್ಲು ಕಡಿಯುತ್ತ, "ಏನೋ ಇದು ಮಾಂತ್ರಿಕ ಪಿಶಾಚಿ! ಇದೇನು ಮಾಡಿದೆ! ನಮ್ಮನ್ನು ತಪ್ಪಿಸಿಕೊಂಡು ಬದುಕಬಲ್ಲೆ ಎಂದು ಭಾವಿಸಿದಿಯಾ? ಒಂದೇ ಗುದ್ದಿಗೆ ನೆಲ ಹಿಡಿಯುವಿ!'' ಎಂದು ಗರ್ಜಿಸುತ್ತ ಮುಂದೆ ಹಾರಿ ಮಾಂತ್ರಿಕನ ಗಡ್ಡವನ್ನು ಹಿಡಿದನು

ಆಗ ಆ ಗಡ್ಡದ ಮಾಂತ್ರಿಕ, "ಅವಸರಪಡಬೇಡ ಅಯ್ಯಾ, ನಾನೇನೂ ದ್ರೋಹ ಮಾಡಲಿಲ್ಲ. ಅಂಥಾ



ಬುದ್ಧಿ ನನಗಿದ್ದರೆ ಈ ರಹಸ್ಯಗಳನ್ನೆಲ್ಲ ಹೇಳುತ್ತಿದ್ದೆನೋ? ನೀವು ಮಾಡಬೇಕಾದುದನ್ನು ಒಮ್ಮೆಲೇ ಹೇಳಲಿಲ್ಲ. ಈಗ ನಿಮ್ಮ ಕಣ್ಣಿನ ಗುಡ್ಡುಗಳೇ ಹೋಗಿವೆಯಲ್ಲವೆ? ನಿನ್ನ ಹತ್ತಿರವಿರುವ ಹಸರು ಅಂಜನವನ್ನು ರೆಪ್ಪೆಗಳ ಮೇಲೆ ಹಚ್ಚಿಕೊಂಡು ನೋಡು'' ಎಂದನು.

ಅದರಂತೆ ಉದಯನನು ಮೊದಲೇ ಗುರುತಿಟ್ಟುಕೊಂಡಿದ್ದ ಹಸುರು ಅಂಜನವನ್ನು ತನ್ನ ರೆಪ್ಪೆಗಳ ಮೇಲೆ ಹಚ್ಚಿಕೊಂಡನು. ಕೂಡಲೇ ಅವನಿಗೆ ಎಂದಿನಂತೆ ದೃಷ್ಟಿ ಬಂದಿತು.

ಆಮೇಲೆ ಅವನು ಅದೇ ಅಂಜನವನ್ನು ತನ್ನ ಸೋದರರ ರೆಪ್ಪೆಗಳಿಗೂ ಹಚ್ಚಿದನು. ಅವರಿಗೂ ಶುದ್ಧವಾದ ದೃಷ್ಟಿ ಶಕ್ತಿ ಬಂದಿತು. ಇಷ್ಟೊಂದು ಮಹೋಪಕಾರ ಮಾಡುವವನ ಮೇಲೆ ತಾನು ದುಡುಕಿ ಕೋಪಿಸಿದೆನೆಂದು ಉದಯನನಿಗೆ ನಾಚಿಕೆಯಾಯಿತು. ರಾತ್ರಿಯ ಹೊತ್ತಿನಲ್ಲಿ ಹೊರತು



ಕಣ್ಣು ಕಾಣಿಸದ ನಿಶೀಥನೂ, ಸಂಧ್ಯಾ ಸಮಯದಲ್ಲಿ ಮಾತ್ರ ನೋಡಬಲ್ಲವನಾದ ಸಂಧ್ಯಾಕುಮಾರನೂ ಈಗ ಎಲ್ಲಾ ವೇಳೆಗಳಲ್ಲಿಯೂ ಚೆನ್ನಾಗಿ ನೋಡ ಬಲ್ಲವರಾದರು. ಅವರಿಗಾದ ಸಂತೋಷಕ್ಕೆ ಮಿತಿ ಮೇರೆ ಇರಲಿಲ್ಲ. ಮಾಂತ್ರಿಕನ ಮೇಲೆ ಅವರ ನಂಬುಗೆಯೂ ಆದರವೂ ಗಟ್ಟಿಯಾಯಿತು.

ಮೂವರು ಸಹೋದರರೂ ಮಾಂತ್ರಿಕನಾದ ಗಡ್ಡದ ಮನುಷ್ಯನಿಗೆ ಕೃತಜ್ಞತೆ ಹೇಳಿ, ತಮ್ಮ ಕುದುರೆಗಳನ್ನು ತರಲು ಹೊರಟರು. ಮೊದಲು ಅವರು ಯಾವ ಮರದ ಬುಡದಲ್ಲಿ ಎರಡು ಕುದುರೆ ಗಳನ್ನು ಕಟ್ಟಿದ್ದರೋ ಅಲ್ಲಿಗೆ ಹೋಗಿ ನೋಡಿದರು. ಉದಯನನು ತನ್ನ ಹತ್ತಿರವಿದ್ದ ಕಪ್ಪು ಭಸ್ಮವನ್ನು ಚೆಲ್ಲಿದ ಕೂಡಲೇ, ಯಥಾಪ್ರಕಾರ ಕುದುರೆಗಳೆರಡೂ ಪ್ರತ್ಯಕ್ಷವಾದುವು. ಅವುಗಳನ್ನು ತೆಗೆದುಕೊಂಡು ಅವರು ಕಪ್ಪು ಕುದುರೆಯನ್ನು ಅಡಗಿಸಿಟ್ಟ ಸ್ಥಳದಿಂದ ಅದನ್ನು ಕೂಡಾ ತೆಗೆದುಕೊಂಡು, ಮಾಂತ್ರಿಕನ ನಾರು ದಾರಗಳಿರುವ ಆ ಮನೆಗೇ ಬಂದರು. ಆಗ ಗಡ್ಡದ ಮಾಂತ್ರಿಕ, "ನಿಮ್ಮ ಎಲ್ಲಾ ಕೋರಿ ಗಳೂ ನೆರವೇರಿದುವಷ್ಟೆ? ಇನ್ನು ನಿಮ್ಮ ದಾ ಹಿಡಿದು ನೀವು ಹೋಗಬಹುದು. ನನಗೆ ಮಾತು ಕೊಟ್ಟ ಪ್ರಕಾರ ನನ್ನ ಹಾರವನ್ನು ಮಾತ್ರ ಆ ಗುಹೆ ಯಲ್ಲಿಟ್ಟು ಹೋಗಿರಿ. ಮಾತು ತಪ್ಪಲಾರಿರಷ್ಟೆ? ಒಂದುವೇಳೆ ಮಾತು ತಪ್ಪಿದರೆ—" ಎನ್ನುವಷ್ಟರಲ್ಲಿ ನಿಶೀಥನು ಅವನನ್ನು ಮುಂದೆ ಮಾತಾಡಲು ಬಿಡದೆ, "ಅದೆಲ್ಲಾ ಕನಸಿನಲ್ಲಿಯೂ ನೆನೆಸಬೇಡ. ಮಾತೆಂದರೆ ಮಾತೇ. ಒಂದು ವಿಷಯ. ಇಷ್ಟೆಲ್ಲಾ ಪರಿಚಿತನಾದ ನೀನು ಯಾರು? ನಿಜವಾಗಿಯೂ ಮಂತ್ರವೇತ್ತನೆ? ಕಾಡಿನಲ್ಲಿ ಸಿಕ್ಕಿಬೀಳುವ ಪ್ರಯಾಣಿಕರನ್ನು ಏತಕ್ಕೆ ಈ ರೀತಿಯಾಗಿ ನಿರ್ಬಂಧಿ ಸುವೆ? ನಿನ್ನ ಗುರಿಯೇನು?" ಎಂದು ಕೇಳಿದ.

ಅದಕ್ಕೆ ಗಡ್ಡದ ಮಾಂತ್ರಿಕ, "ಕ್ಷಮಿಸಿರಿ. ಆ ಸಂಗತಿ ನಾನು ಹೇಳಕೂಡದು. ಅದೊಂದು ದೊಡ್ಡ ರಹಸ್ಯ. ಅದನ್ನು ಹೇಳಿಬಿಟ್ಟೆನೆಂದರೆ ತಲೆಯೊಡೆದು ಸಾಯುತ್ತೇನೆ. ಕೇಳಲೇಬೇಡಿ. ಒಂದು ಮಾತ್ರ ನಿಶ್ಚಯ, ನನ್ನಿಂದ ನಿಮಗೆ ಎಂದಿಗೂ ಯಾವ ಕೆಡುಕೂ ಆಗುವುದಿಲ್ಲ" ಎಂದನು.

ಮೂವರು ಸೋದರರಿಗೂ ಆತನ ಮೇಲೆ ಸಹಾನುಭೂತಿಯುಂಟಾಯಿತು. ಅವನ ರಹಸ್ಯವನ್ನು ಕೆದಕುವ ಗೊಡವೆಯನ್ನು ಬಿಟ್ಟರು. ಮೂವರೂ ಅವನಿಗೆ ಧನ್ಯವಾದ ಹೇಳಿ ತಮ್ಮ ತಮ್ಮ ಕುದುರೆಗಳ ಮೇಲೆ ಏರಿಕೊಂಡು ಹೊರಟರು.

ಹೋಗುತ್ತಾ ಉದಯನನು ಹಿಂದಿರುಗಿ ಆ ಗಡ್ಡದ ಮಾಂತ್ರಿಕನನ್ನು ನೋಡಿ, "ಏನಯ್ಯಾ, ಇನ್ನೊಂದು ಕೋರಿಕೆ ಸ್ಪಷ್ಟಪಡಿಸಿಬಿಡುತ್ತೇವೆ. ಆಮೇಲೆ ದೂರಬೇಡ. ನಿನ್ನ ಹಾರ ಮಾತ್ರ ನಿನಗೆ ಬಿಟ್ಟು ಹೋಗುತ್ತೇವೆಯೇ ಹೊರತು, ಅ ಅಂಜನ, ಭಸ್ಮ, ಕರವಸ್ತ್ರಗಳನ್ನು ನಾವ

ಇಟ್ಟುಕೊಳ್ಳುತ್ತೇವೆ. ಅದಕ್ಕೆ ನಿನ್ನದೇನೂ ಕೋಪವೂ ಆಕ್ಷೇಪಣೆಯಿಲ್ಲವಷ್ಟೆ ?'' ಎಂದನು.

''ಆಕ್ಷೇಪಣೆ ಮಾಡಿದರೂ ನೀವು ಕೊಡಲಾರಿರಿ ! ಅಭ್ಯಂತರವಾಗಿಲ್ಲ; ತೆಗೆದುಕೊಳ್ಳಿರಿ'' ಎಂದ ಆ ಮಾಂತ್ರಿಕ. ಬಹಳ ಸಂತೋಷದಿಂದ ಮೂವರು ಸೋದರರೂ ಪ್ರಯಾಣ ಮುಂದುವರಿಸಿದರು. ಬಿಳೀ ಕುದುರೆಯ ಮೇಲೆ ಉದಯನ ಕಪ್ಪು ಕುದುರೆಯ ಮೇಲೆ ನಿಶೀಥ, ಕೆಂಪು ಕುದುರೆಯ ಮೇಲೆ ಸಂಧ್ಯಾಕುಮಾರ, ಆಗ ಹೆಚ್ಚಿನ ಉತ್ಸಾಹದಿಂದ ಶೋಭಿಸುತ್ತಿದ್ದರು.

ಹೇಳಿದಂತೆ ಪಶ್ಚಿಮದಿಕ್ಕನ್ನು ಹಿಡಿದೇ ಸಾಗಿದರು. ಬಂಡೆಯ ಗುಹೆಯೂ ಬಂದಿತು. ಮಾತು ಕೊಟ್ಟ ಪ್ರಕಾರ ಉದಯನನು ತನ್ನ ಕೊರಳಿನಲ್ಲಿದ್ದ ಹಾರವನ್ನು ತೆಗೆದು ಆ ಗುಹೆಯಲ್ಲಿಟ್ಟನು.

ಹಾರವನ್ನು ಕೊರಳಿನಿಂದ ಎತ್ತಿದ ಕೂಡಲೇ, ಅವನ ಗಿಡ್ಡ ರೂಪವೂ ಅಷ್ಟುದ್ದದ ಗಡ್ಡವೂ ಮಾಯವಾಗಿ ಹೋಗಿ, ಮಾಮೂಲು ರೂಪಾಕಾರದವನಾದನು. ಆಮೇಲೆ ಅವರು ಮೂವರೂ ತಮ್ಮ ತಮ್ಮ ಕುದುರೆಗಳನ್ನು ಉತ್ಸಾಹದಿಂದ ತಟ್ಟಿ, ಮುಂದು ಸಾಗಿಸಿಕೊಂಡು ವೇಗವಾಗಿ ಹೊರಟು ಹೋದರು.

ಸ್ವಲ್ಪ ದೂರ ಸಾಗಿದ ಮೇಲೆ, ದಟ್ಟವಾದೊಂದು ಕಾಡಿನೊಳಗೆ ನುಗ್ಗಿ ಮುಂದೆ ಹೋಗಬೇಕಾಯಿತು. ಆಗತಾನೇ ಸೂರ್ಯಾಸ್ತವಾಗಿ, ಕತ್ತಲೆ ಬೇರೆ ಕವಿಯ ತೊಡಗಿತ್ತು. ರಾತ್ರಿಯ ವೇಳೆಯಲ್ಲಿ ಆ ಕಾಡಿನೊಳಗೆ ಎಲ್ಲಿ ವಿಶ್ರಾಂತಿ ಪಡೆಯಲು ಸಾಧ್ಯ? ಏನು ಮಾಡುವುದೆಂದು ಅವರು ಆಲೋಚಿಸುತ್ತಿರುವಾಗ, ಮೂರು ಸಿಂಹಗಳು ಅವರ ಕಡೆಗೆ ಗರ್ಜಿಸಿಕೊಂಡು ಬರತೊಡಗಿದುವು. ಅವುಗಳನ್ನು ನೋಡಿ ನಿಶೀಥನೂ, ಸಂಧ್ಯಾಕುಮಾರನೂ ಏನಾದರೂ ಮಾಡಬೇಕೆಂದು ತಮ್ಮ ತಮ್ಮ ಕತ್ತಿಗಳಿಗೆ ಕೈಹಾಕಿದರು.

ಅಷ್ಟರಲ್ಲಿ ಯುಕ್ತಿಶಾಲಿಯಾದ ಉದಯನನು, ತನ್ನ ಹತ್ತಿರವಿರುವ ಬಿಳಿಯ ಭಸ್ಮದ ಕರಡಿಗೆಯನ್ನು ತೆಗೆದು, ಅದರಲ್ಲಿದ್ದ ಪುಡಿಯನ್ನು ನಿಶೀಥ, ಸಂಧ್ಯಾ, ಮತ್ತು ಕುದುರೆಗಳ ಮೇಲೆ, ಕಡೆಗೆ ತನ್ನ ಮೇಲೆ ಕೂಡಾ ಚೆಲ್ಲಿದನು. ಮರುಕ್ಷಣದಲ್ಲಿ ಅವರಿದ್ದ ಜಾಗ



ದಲ್ಲಿ ಏನೂ ಇರಲಿಲ್ಲ. ಯಾವ ಸದ್ದೂ ಕೇಳಿಸಲಿಲ್ಲ. ಅವರು ಕುದುರೆಗಳೊಂದಿಗೆ ಮಾಯವಾಗುವುದಕ್ಕೂ, ಮೂರು ಸಿಂಹಗಳೂ ಅಲ್ಲಿಗೆ ಬರುವುದಕ್ಕೂ ಸರಿಹೋಯಿತು. ಭಾರಿ ಊಟ ದೊರೆಯಿತೆಂಬ ಆನಂದದಿಂದ ಓಡಿಬಂದ ಆ ಸಿಂಹಗಳಿಗೆ ದೊಡ್ಡ ನಿರಾಶೆಯಾಗಿ ಹೋಯಿತು. ಚಕ್ರದ ಸುಳಿಯಲ್ಲಿ ಸಿಕ್ಕಿದ ಪ್ರಾಣಿಗಳ ಹಾಗೆ ಸ್ವಲ್ಪ ಹೊತ್ತು ಅಲ್ಲಿಯೇ ಸುತ್ತಾಡಿ ಮತ್ತೆತ್ತಲೋ ಹೋದುವು ಪಾಪ.

ಸಿಂಹಗಳು ಹೊರಟು ಹೋದ ಸಂಗತಿ ತಿಳಿದರೂ, ನಿಜ ರೂಪಧಾರಿಗಳಾಗಲು ಮೂವರು ಸಹೋದರರಿಗೂ ಸ್ವಲ್ಪ ವೇಳೆ ಹಿಡಿಯಿತು. ತಾವು ಆ ಗಾಢಾರಣ್ಯದೊಳಗೆ ನಿಜ ರೂಪದಿಂದ ಹೊಕ್ಕು ಪ್ರಯಾಣ ಮಾಡುವುದಕ್ಕೆ ರಾತ್ರಿಯ ವೇಳೆ ಒಳಿತಲ್ಲವೆಂದು ಕೊಂಡು ಮೂವರೂ ಮಾಯಾ ರೂಪದಿಂದ ಅಲ್ಲೇ ಅಂತರದಲ್ಲಿ ವಿಹರಿಸಿಕೊಂಡಿದ್ದರು.

ಬೆಳಗಾಯಿತು. ಉದಯನನು ತನ್ನ ಹತ್ತಿರವಿದ್ದ ಕಪ್ಪು ಭಸ್ಮವನ್ನು ತನ್ನ ಮೇಲೂ, ಸೋದರರ ಮೇಲೂ, ಕುದುರೆಗಳ ಮೇಲೂ ಚೆಲ್ಲಿದನು. ಕೂಡಲೇ ಮೂವರೂ ನಿಜ ರೂಪದಿಂದ ತಮ್ಮ ತಮ್ಮ ಕುದುರೆಗಳ ಮೇಲೆ ಪ್ರತ್ಯಕ್ಷರಾದರು.

ಅಲ್ಲಿಂದ ಅವರ ಪ್ರಯಾಣ ವಾಯುವೇಗದಿಂದಲೇ ಸಾಗಿತೆನ್ನಬೇಕು. ಗಡ್ಡದ ಮಾಂತ್ರಿಕನ ಮೂಲದಿಂದ ಮೂವರಿಗೂ ಸರಿಯಾದ ದೃಷ್ಟಿ ಶಕ್ತಿ ಬಂದಿತ್ತು. ಆದುದರಿಂದ ಯಾರು ಮುಂದು ಯಾರು ಹಿಂದೆ ಎಂಬ ಪ್ರಶ್ನೆಗೆ ಅವಕಾಶವಿರಲಿಲ್ಲ.

ಹೀಗೆ ಅವರು ಆ ಕಾಡನ್ನು ದಾಟಿ ಮುಂದ ವರಿಯುತ್ತಿರಲು, ಸ್ವಲ್ಪ ದೂರದಲ್ಲಿ ನಿರ್ಮಾನುಷ್ಯದಂತೆ ಕಾಣುವ ಪ್ರದೇಶದಲ್ಲಿ ದೊಡ್ಡ ದೊಂದು ಭವನವಿರುವುದನ್ನು ನೋಡಿದರು.

"ಭವನವಿದೆಯೆಂದ ಮೇಲೆ ನಿರ್ಮಾನುಷ್ಯವೆನ್ನುವಂತಿಲ್ಲ. ಈಗ ನಾವು ಮೂವರಲ್ಲಿ ಯಾರು ಮೊದಲು ಆ ಭವನವನ್ನು ಮುಟ್ಟುವೆವೋ ನೋಡೋಣ" ಎಂದು ಪಂಥ ಕಟ್ಟಿಕೊಂಡು, ಮೂವರೂ ತಮ್ಮ ಕುದುರೆಗಳನ್ನು ಜೋರಾಗಿ ಹುರುಡಿಸಿದರು. ನೋಡ ನೋಡುತ್ತಿರಲು ಇಬ್ಬರನ್ನು ಮೀರಿಸಿ ಉದಯನನ ಕುದುರೆ ಮುಂದೆ ಓಡತೊಡಗಿತು. ಅವನ ಹಿಂದೆ ಸಂಧ್ಯಾಕುಮಾರ ಮತ್ತು ಸಿಶೀಥರು ಸಮಾನ ವೇಗದಲ್ಲಿದ್ದರು. ಅಷ್ಟರಲ್ಲಿ ಅದೇನಾಯಿತು? ಮುಂದೆ ಹೋಗುತ್ತಿದ್ದ ಉದಯನನು ರೆಪ್ಪೆ ಮುಚ್ಚಿ ತೆರೆಯುವುದರೊಳಗೆ ಮಾಯವಾಗಿದ್ದ. ಏನಿದು? ಹೇಗದು? ಗೋಡೆಯೋ ಗುಡ್ಡೆಯೋ ಬಾಗಿಲೋ ಗುಹೆಯೋ ಏನೂ ಇಲ್ಲದ ಪ್ರದೇಶದಲ್ಲಿ, ಕಾಣುತ್ತಿದ್ದವನು ಕಾಣದೇ ಹೋಗುವುದೆಂದರೇನು?

(ಇನ್ನೂ ಇದೆ)






# ವೀರಹನುಮಾನ್

ರಾಮನು ರಾವಣನನ್ನು ಕುರಿತು ಸುಗ್ರೀವನೊಡನೆ ಆ ಪ್ರಶ್ನೆ ಮಾಡಿದುದನ್ನು ಕೇಳಿದ ಕೂಡಲೇ, ಸುಗ್ರೀವನಿಗೆ ಬಹಳ ದುಃಖವಾಯಿತು. ಸೀತೆಯ ವಿಷಯದಲ್ಲಿ ರಾಮನಿಗಿರುವ ಪ್ರೇಮದ ಆಳತೆಯೆಷ್ಟೆಂಬುದು ಗೊತ್ತಾಗಿ ಸುಗ್ರೀವನು ಕಣ್ಣೀರು ಸುರಿಸುತ್ತ, ಗದ್ಗದ ಸ್ವರದಿಂದ, "ರಾಮಾ, ಒಮ್ಮೆ ನೋಡಿದೆನೇ ಹೊರತು ಆ ರಾವಣನು ಎಲ್ಲಿರುವನೆಂಬುದು ನನಗೆ ತಿಳಿಯದು. ಆದರೆ ನನ್ನನ್ನು ದೃಢವಾಗಿ ನಂಬು. ಬೇಕಾದರೆ ಪ್ರತಿಜ್ಞೆಯನ್ನೇ ಮಾಡುತ್ತೇನೆ. ಸೀತಾದೇವಿ ಮತ್ತೆ ನಿನ್ನ ಕೈಗೆ ಸಿಕ್ಕುವುದಕ್ಕೆ ಅಗತ್ಯವಾದ ಎಲ್ಲಾ ಪ್ರಯತ್ನಗಳನ್ನೂ ಮಾಡುತ್ತೇನೆ. ನಿನಗೆ ಸಂತೋಷ ಉಂಟಾಗುವಂತೆ ಮಾಡುವುದೇ ನನ್ನ ವ್ರತವಾಗಿರುತ್ತದೆ. ರಾವಣನು ಸೀತೆಯನ್ನು ಯಾವ ಲೋಕಕ್ಕಾದರೂ ಕೊಂಡೊಯ್ದಿರಬಹುದು. ಹುಡುಕಿಸುವ ಭಾರ ನನ್ನದು. ಕಾಲ ಕೂಡಿ ಬರುವವರೆಗೆ ನೀನು ಧೈರ್ಯವಾಗಿರಬೇಕು. ನಾನು ಕೂಡಾ ನಿನ್ನಂತೆಯೇ ಹೆಂಡತಿಯನ್ನು ಕಳೆದುಕೊಂಡವನು. ಧೈರ್ಯವಾಗಿದ್ದೇನೆ. ನಿನ್ನ ಸಂಕಟವನ್ನು ಅರಿಯಬಲ್ಲೆ. ಚಿಂತೆ ಮಾಡಬೇಡ" ಎಂದನು.

ಸುಗ್ರೀವನು ಈ ರೀತಿಯಾಗಿ ಸಮಾಧಾನ ಮಾಡುತಿರಲು ರಾಮನು ಕಂಬನಿಯಿಂದ ಒದ್ದೆಯಾದ ತನ್ನ ಮುಖವನ್ನು ಒರೆಸಿಕೊಂಡನು. ಒಂದು ನಿಟ್ಟುಸಿರಿನಿಂದ ದುಃಖಶಮನ ಮಾಡಿಕೊಂಡವನಂತೆ. "ಸುಗ್ರೀವಾ, ನಿಜವಾದ ಮಿತ್ರನಂತೆಯೇ ಮಾತಾಡಿದೆ. ಈಗ ನಾನಿರುವ ಸ್ಥಿತಿಯಲ್ಲಿ ನಿನ್ನಂತಹ ಆಪ್ತನ ಸ್ನೇಹ ದೊರಕುವುದೇ ದುರ್ಲಭ. ನೀನು ಮಾತ್ರ ಆ ರಾವಣನು ಎಲ್ಲಿರುವನೆಂದು, ಸೀತೆಯನ್ನು ಎಲ್ಲಿ ಅಡಗಿಸಿಟ್ಟಿರುವನೆಂದು ಹುಡುಕಿಸಬೇಕು. ಅದಕ್ಕೆ ಬೇಕಾದ ಬಲ ಪರಿವಾರಗಳೆಲ್ಲ ನಿನ್ನಿಂದಲೇ ಲಭಿಸಬೇಕಾಗಿದೆ. ಅದಕ್ಕಾಗಿ ನನ್ನಿಂದ ನಿನಗೇನಾಗಬೇಕೆಂಬುದನ್ನು ಹೇಳು. ಆ ಕಾರ್ಯ ನನ್ನಿಂದ ಆಗುವುದೋ ಇಲ್ಲವೋ ಎಂದು ಸಂಶಯ ಪಡಬೇಡ. ನಾನು ವಾಲಿಯನ್ನು ಕೊಲ್ಲುವೆನೆಂದ ಮಾತು ಯಥಾರ್ಥವೆಂದು ತಿಳಿ. ಅವನು ಎಷ್ಟೇ ಬಲವಂತನಾಗಿದ್ದರೂ ಸರಿಯೇ



ನಾನು ಈ ವರೆಗೂ ಸುಳ್ಳು ಮಾತು ಹೇಳಿದವನಲ್ಲ; ಇನ್ನು ಮುಂದೆಯೂ ಹೇಳುವುದಿಲ್ಲ" ಎಂದನು.

ರಾಮನ ಮಾತು ಕೇಳಿ ಸುಗ್ರೀವ ಮತ್ತು ಅವನ ಮಂತ್ರಿಗಳೆಲ್ಲ ತುಂಬಾ ಸಂತೋಷಪಟ್ಟರು. ಸುಗ್ರೀವನು ರಾಮನೊಂದಿಗೆ ಹೀಗೆಂದನು:

"ರಾಮಾ. ನನ್ನನ್ನು ನನ್ನ ಅಣ್ಣ ಮೋಸಪಡಿಸಿ ನನ್ನ ಹೆಂಡತಿಯನ್ನು ಅಪಹರಿಸಿದನು. ನನಗೆ ಏನು ಮಾಡಬೇಕೆಂದೇ ತಿಳಿಯುವುದಿಲ್ಲ. ಹೀಗೆ ಕಾಡು ಬದುಕು ಬದುಕುತ್ತಿದ್ದೇನೆ. ಬಲವಂತನಾದ ವಾಲಿ ನನ್ನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿದ್ದು ಮಾತ್ರವಲ್ಲದೆ, ನನ್ನನ್ನು ಕೊಲ್ಲಿಸಲಿಕ್ಕೂ ಪ್ರಯತ್ನ ಮಾಡಿದ್ದಾನೆ. ಅವನು ನನ್ನ ಮೇಲೆ ಕಳುಹಿಸಿದ ಎಷ್ಟೋ ವಾನರ ವೀರರನ್ನು ನಾನು ಕೊಂದಿದ್ದೇನೆ. ಆ ನನ್ನ ಅಣ್ಣನ ಭಯದಿಂದಲೇ ನಾನು ನಿನ್ನನ್ನು ನೋಡಿ ಹೆದರಿ ಅಡಗಿದೆ. ಈ ಸ್ಥಿತಿಯಲ್ಲಿರುವ ನನಗೆ ಈ ಹನುಮಂತನೇ ಮೊದಲಾದವರು ತುಂಬ ವಿಶ್ವಾಸದಿಂದ ಸಹಾಯಕರಾಗಿದ್ದಾರೆ. ನನ್ನ ಮೇಲಿನ ಸ್ನೇಹದಿಂದ ಸದಾ ಕಾಲ ನನ್ನನ್ನು ಕಾಪಾಡಿಕೊಂಡಿದ್ದಾರೆ. ನಾನು ಎಲ್ಲಿಗೆ ಹೋದರೆ ಅಲ್ಲಿಗೆ ಬರುತ್ತಾರೆ. ನನ್ನೊಂದಿಗೆ ಇವರೂ ಕಷ್ಟಪಡುತ್ತಿದ್ದಾರೆ. ನಾನೊಬ್ಬ ಕಷ್ಟಪಡುವುದಲ್ಲದೆ, ಇವರೆಲ್ಲರ ಕಷ್ಟಗಳೂ ನನಗೆ ವೇದನೆಯಾಗಿದೆ. ಹೀಗೆ ಎಷ್ಟು ಕಾಲ ಜೀವಿಸಿಕೊಂಡಿರಲಿ. ವಾಲಿ ಸತ್ತರೆ ಹೊರತು ನನಗೆ ಕ್ಷೇಮವಿಲ್ಲ!"

ರಾಮನು ಸುಗ್ರೀವನ ಮಾತು ಕೇಳಿ ಮುಗುಳು ನಗುತ್ತ, "ಶಂಕಿಸಬೇಡ. ನನ್ನ ಒಂದೇ ಬಾಣವು ವಾಲಿಯನ್ನು ಕೊಲ್ಲುತ್ತದೆ. ನನ್ನ ಕಣ್ಣಿಗೆಬಿದ್ದ ಮರುಕ್ಷಣದಲ್ಲಿ ಅವನು ಸಾಯುತ್ತಾನೆ. ನೀನು ಕೂಡಾ ಈಗ ನಾನಿರುವ ಸ್ಥಿತಿಯಲ್ಲೇ ಇರುವಿ. ಬೇಗದಲ್ಲೇ ನಿನ್ನ ದುಃಖವು ತೀರಿಹೋಗುತ್ತದೆ. ಅವನು ನನ್ನ ಕಣ್ಣಿಗೆ ಬೀಳುವಂತೆ ಮಾಡು" ಎಂದನು.

ಸುಗ್ರೀವನಿಗೆ ರಾಮನ ಮಾತಿನಲ್ಲಿ ಇನ್ನೂ ಪೂರ್ಣ ವಿಶ್ವಾಸ ಹುಟ್ಟದುದರಿಂದ, ಅವನು ವಾಲಿಯ ಬಲ ಸತ್ವಗಳನ್ನು ವಿವರಿಸಿ ಹೇಳಿದನು: ವಾಲಿ ಬೆಳಗಾಗುವುದಕ್ಕೆ ಮೊದಲೇ ಏಳುತ್ತಾನೆ. ಸೂರ್ಯೋದಯವಾಗುವುದರೊಳಗೆ ಅವನು ನಾಲ್ಕು ದಿಕ್ಕಿನ ಸಮುದ್ರಗಳಲ್ಲಿಯೂ ಸ್ನಾನಮಾಡಿ ಸೂರ್ಯನಿಗೆ ಅರ್ಘ್ಯಬಿಟ್ಟು ಸಂಧ್ಯಾವಂದನ ಮಾಡುತ್ತಾನೆ. ಪರ್ವತ ಶಿಖರಗಳ ಮೇಲೆ ಏರಿ ದೊಡ್ಡ ದೊಡ್ಡ ಬಂಡೆ ಕಲ್ಲುಗಳನ್ನು ಚೆಂಡಿನ ಹಾಗೆ ಮೇಲೆ ಹಾರಿಸಿ ಹಿಡಿದು ಆಟವಾಡುತ್ತಾನೆ. ಅರಣ್ಯಗಳಲ್ಲಿ ದೊಡ್ಡ ದೊಡ್ಡ ಮರಗಳನ್ನು ಮುರಿದು ತನ್ನ ಬಲವನ್ನು ನೋಡಿಕೊಳ್ಳುತ್ತಾನೆ. ಸಾವಿರ ಆನೆಗಳ ಬಲವಿರುವ ದುಂದುಭಿ ಎಂಬವನನ್ನು ಗುದ್ದಿ ಕೊಂದವನು ವಾಲಿ.

ಆ ದುಂದುಭಿ ಸಾಮಾನ್ಯದವನೇನಲ್ಲ. ಕೋಣನ ಮುಖದವನು. ಅವನು ಗರ್ವದಿಂದ ಮದಿ... ಮೊದಲು ಸಮುದ್ರ ರಾಜನ ಬಳಿಗೆ ಹೋ...

ತನ್ನೊಂದಿಗೆ ದ್ವಂದ್ವ ಯುದ್ಧ ಮಾಡಲು ಕರೆದನು. ಆಗ ಸಮುದ್ರ ರಾಜನು ಅವನನ್ನು ನೋಡಿ, "ನಿನ್ನೊಡನೆ ಯುದ್ಧ ಮಾಡುವ ಶಕ್ತಿ ನನಗಿಲ್ಲಪ್ಪಾ. ಅದಕ್ಕೆ ತಕ್ಕ ಸಮರ್ಥನಾದವನೆಂದರೆ ಹಿಮವಂತನೇ. ಅವನೊಂದಿಗೆ ನೀನು ಯುದ್ಧ ಮಾಡಿದರೆ ನಿನ್ನ ಭುಜಗಳ ತುರಿಕೆ ತೀರಿಹೋಗುತ್ತದೆ. ಅಲ್ಲಿಗೆ ಹೋಗಿ ಗುದ್ದಾಡು" ಎಂದು ಹೇಳಿದನು.

ಸಮುದ್ರ ರಾಜನೇ ತನ್ನನ್ನು ನೋಡಿ ಹೆದರಿದ ನೆಂದು ದುಂದುಭಿ ಬಹಳ ಸಂತೋಷಪಟ್ಟು ಶರವೇಗ ದಿಂದ ಹಿಮಾಲಯಕ್ಕೆ ಹೋಗಿ, ಅಲ್ಲಿಯ ಬೆಟ್ಟ ಗಳನ್ನು ಕೊಂಬುಗಳಿಂದ ತಿವಿತಿವಿದು ಗರ್ಜಿಸಿದನು.

ಇದನ್ನು ನೋಡಿ ಹಿಮವಂತನು ದೊಡ್ಡದೊಂದು ಪರ್ವತ ಶಿಖರದ ಮೇಲೆ ಬಂದು ನಿಂತು, "ದುಂದುಭೀ, ಸುಮ್ಮಸುಮ್ಮನೆ ಯುದ್ಧ ಮಾಡಿ ನನ್ನನ್ನೇಕೆ ಬಾಧಿ ಸುವೆ? ನಾನು ಯುದ್ಧ ಮಾಡಲು ಉಪಯೋಗ ವಿಲ್ಲದವನು. ಇಲ್ಲಿ ಸಾವಿರಾರು ಮುನಿಗಳು ತಪಸ್ಸು ಮಾಡಿಕೊಂಡಿದ್ದಾರೆ. ಇವರಿಗೆಲ್ಲ ಕಷ್ಟ ಕೊಡಲು ನನಗಿಷ್ಟವಿಲ್ಲ. ಪರ್ವತಮಯವಾದ ಇದು ಯುದ್ಧಕ್ಕೆ ತಕ್ಕ ಸ್ಥಳವೂ ಅಲ್ಲ" ಎಂದನು.

ದುಂದುಭಿ ಮಹಾಕೋಪದಿಂದ, "ಯುದ್ಧ ಮಾಡಲು ನಿನ್ನ ಕೈಲಾಗದಿದ್ದರೆ ಅದಕ್ಕೆ ತಕ್ಕವನಾರೆಂಬು ದನ್ನಾದರೂ ಹೇಳು. ಆಮೇಲೆ ನಿನ್ನನ್ನು ಮಾತಾಡಿ ಸುತ್ತೇನೆ" ಎಂದನು.

"ನಿನಗೆ ಯುದ್ಧವೇ ಬೇಕೆಂದಿದ್ದರೆ ಕಿಷ್ಕಿಂಧೆಯಲ್ಲಿ ರುವ ವಾಲಿಯ ಬಳಿಗೆ ಹೋಗು. ಅವನನ್ನು ಗೆಲ್ಲಲು ಯಾರಿಂದಲೂ ಸಾಧ್ಯವಿಲ್ಲ. ಅಲ್ಲಿಗೆ ಹೋದರೆ ಎಂದೂ ಆಗದಷ್ಟು ತೃಪ್ತಿ ನಿನಗಾಗುತ್ತದೆ. ಇದು ನಿಜ" ಎಂದು ಹಿಮವಂತನು ಹೇಳಿದನು.

ಅಲ್ಲಿಂದ ಹೊರಟ ದುಂದುಭಿ ಕಿಷ್ಕಿಂಧಾ ನಗರದ ದ್ವಾರದ ಬಳಿಗೆ ಬಂದು ದೊಡ್ಡ ಗರ್ಜನೆ ಮಾಡಿದನು. ಅವನು ಅದರ ಸುತ್ತಮುತ್ತಲಿದ್ದ ದೊಡ್ಡ ದೊಡ್ಡ



ಮರಗಳನ್ನು ಮುರಿಯುತ್ತ, ತನ್ನ ಗೊರಸುಗಳಿಂದ ನೆಲವನ್ನು ಗೀರುತ್ತ, ಕೊಂಬುಗಳಿಂದ ದ್ವಾರವನ್ನು ಹೊಡೆಯುತ್ತ, ಭಾರಿ ಸೈನ್ಯವು ಮಾಡುವ ಆರ್ಭಟೆ ಯೆಬ್ಬಿಸುವುದನ್ನು ಕೇಳಿ ವಾಲಿ ಸಿಡಿದೆದ್ದನು.

ಅವನು ಅಂತಃಪುರದ ಸ್ತ್ರೀಯರನ್ನೂ ಹಿಂದಿಟ್ಟು ಕೊಂಡು, ದುಂದುಭಿಯ ಬಳಿಗೆ ಬಂದು, "ಎಲೋ ದುಂದುಭೀ, ನಾನು ನಿನ್ನನ್ನು ಬಲ್ಲೆ. ಏತಕ್ಕಾಗಿ ಈ ಬಗೆಯ ಪುಂಡಾಟ ಮಾಡಿ ಗರ್ಜಿಸುತ್ತಿ? ಏಕೆ ಬಂತು ನಿನಗೀ ಕೊಬ್ಬು? ನಿನಗೆ ಪ್ರಾಣದ ಮೇಲೆ ಆಶೆಯಿಲ್ಲವೆ?" ಎಂದು ಕೇಳಿದನು.

ಈ ಪ್ರಶ್ನೆ ಕೇಳಿ ದುಂದುಭಿ ಉರಿದು ಬೀಳುತ್ತ, "ಈ ಹೆಂಗುಸರ ಮುಂದೆ ಜಂಬ ಹೊಡೆದುಕೊಂಡ ರಾಗಲಿಲ್ಲ. ನನ್ನೊಂದಿಗೆ ಖಾಡಾಖಾಡಿ ಯುದ್ಧ ಮಾಡಿ ನಿನ್ನ ಶಕ್ತಿಯನ್ನು ತೋರಿಸು. ಅದಕ್ಕೆ ಮೊದಲು ನಿನಗೆ ನಾಳೆ ಬೆಳಗ್ಗಿನವರೆಗೆ ಗಡುವು



ಕೊಟ್ಟಿದ್ದೇನೆ. ಅನುಭವಿಸಬೇಕಾದ ಸುಖಗಳನ್ನೆಲ್ಲ ಈ ರಾತ್ರಿಯೇ ಅನುಭವಿಸಿಬಿಡು. ನಿನ್ನ ಬಂಧುಗಳಿಗೆ ಕೊಡುವಂಥಾದ್ದನ್ನೆಲ್ಲ ಕೊಟ್ಟುಬಿಡು. ಮಿತ್ರರೊಂದಿಗೆ ಹೇಳುವ ಮಾತುಗಳನ್ನು ಹೇಳಿ ಮುಗಿಸಿಬಿಡು. ನಿನ್ನ ನಗರವನ್ನೆಲ್ಲ ಒಂದುಸಾರಿ ಕಡೇಬಾರಿ ನೋಡಿಬಿಡು. ನಿನ್ನ ಬದಲಿಗೆ ಬೇರೊಬ್ಬನನ್ನು ರಾಜನನ್ನಾಗಿ ನಿಯಮಿಸಿ ಬಿಟ್ಟು ನನ್ನ ಮುಂದೆ ಬಾ. ನಿನ್ನ ಮದವನ್ನೆಲ್ಲ ಅಡಗಿಸಿ ಹಾಕುತ್ತೇನೆ. ಸುಲಭವಾಗಿ ಪರಲೋಕಕ್ಕೆ ಕಳುಹಿಸುತ್ತೇನೆ" ಎಂದನು.

ಅಷ್ಟೆಲ್ಲ ತಡಮಾಡ ಬೇಡವೆಂದು ವಾಲಿ ಸ್ತ್ರೀಯರನ್ನು ಅಂತಃಪುರಕ್ಕೆ ಕಳುಹಿಸಿ, ದೇವೇಂದ್ರನು ತನಗೆ ಕೊಟ್ಟ ಕಾಂಚನಮಾಲೆಯನ್ನು ಕೊರಳಿನಲ್ಲಿ ಹಾಕಿಕೊಂಡು ದುಂದುಭಿಯ ಮೇಲೆ ಹಾರಿದನು. ಅಷ್ಟೊಂದು ಶಕ್ತಿ ಪಡೆದಿದ್ದ ದುಂದುಭಿ ವಾಲಿಯ ಕೈಯಲ್ಲಿ, ಹುಲಿಯ ಕೈಗೆ ಸಿಕ್ಕಿದ ಜಿಗರೆಯಾದನು. ವಾಲಿ ದುಂದುಭಿಯ ಕೊಂಬುಗಳನ್ನು ಹಿಡಿದು ಎತ್ತಿ ಗಿರಗಿರ ತಿರುಗಿಸಿ ನೆಲಕ್ಕೆ ಹೊಡೆದು ಸಿಂಹನಾದ ಮಾಡಿದನು. ದುಂದುಭಿಯ ಕಿವಿಗಳಿಂದ ರಕ್ತವು ಪ್ರವಾಹವಾಗಿ ಹರಿಯಿತು.

ಆದರೂ ಅವರಿಬ್ಬರೂ ಬಹಳ ಹೊತ್ತು, ಮುಷ್ಟಿಗಳಿಂದ, ಮೊಣಕಾಲುಗಳಿಂದ ಕಲ್ಲುಗಳಿಂದ, ಮರಗಳಿಂದ ಭಯಂಕರವಾಗಿ ಯುದ್ಧ ಮಾಡಿದರು. ಕ್ರಮವಾಗಿ ದುಂದುಭಿಯ ಬಲವು ಕ್ಷೀಣಿಸಿ, ವಾಲಿಯ ಬಲವು ಬೆಳೆಯಿತು. ಕಡೆಗೆ ವಾಲಿ ದುಂದುಭಿಯನ್ನು ಮೇಲೆತ್ತಿ ನೆಲಕ್ಕೆ ಬೀಸಿ ಬಡಿದು ಕೊಂದನು.

ಅಷ್ಟಕ್ಕೆ ಬಿಟ್ಟಿದ್ದರೆ ಕಥೆ ಬೇರೆ ವಿಧವಾಗುತ್ತಿತ್ತು. ಆದರೆ ವಾಲಿ ಅಷ್ಟಕ್ಕೆ ಬಿಡದೆ ದುಂದುಭಿಯ ಕಳೇಬರವನ್ನು ಎತ್ತಿ ಆಡಿಸಿ ಹರದಾರಿ ದೂರ ಹೋಗಿ ಬೀಳುವಂತೆ ಆಕಾಶದ ಮೇಲೆ ಬಿಸುಟನು. ಬಾಯಿಯಿಂದ ರಕ್ತ ಸುರಿಯುತ್ತಿದ್ದ ಆ ಕಳೇಬರವು ಮತಂಗ ಮುನಿಯ ಆಶ್ರಮದ ಮೇಲಿನಿಂದಾಗಿ ಹೋಗಿಬಿತ್ತು. ಅದರ ಹೊಡೆತದಿಂದ ಆಶ್ರಮದ ಕೆಲವು ಮರಗಳು ಮುರಿದುಬಿದ್ದುವು.

ಆಶ್ರಮದಲ್ಲಿ ಬಿದ್ದ ರಕ್ತದ ಕಲೆಗಳನ್ನು ನೋಡಿ ಮತಂಗ ಮಹಾಮುನಿ ಕೋಪದಿಂದ, ಇದಕ್ಕೆಲ್ಲ ಕಾರಣನಾದವನು ವಾಲಿ ಎಂಬುದನ್ನು ತಿಳಿದು, ವಾಲಿ ತನ್ನ ಆಶ್ರಮಕ್ಕೆ ಹರದಾರಿ ದೂರಕ್ಕೆ ಬಂದರೂ ಸತ್ತುಹೋಗುವನೆಂದು ಶಾಪಕೊಟ್ಟನು. ಅಷ್ಟು ಮಾತ್ರವಲ್ಲ, ಆ ವನಪ್ರಾಂತದಲ್ಲಿ ತಿರುಗಾಡಿಕೊಂಡಿದ್ದ ವಾಲಿಯ ಭೃತ್ಯರನ್ನೆಲ್ಲಾ ನೋಡಿ, "ನೀವೆಲ್ಲಾ ಒಂದು ದಿನದೊಳಗೆ ಈ ಪ್ರಾಂತದಿಂದ ಹೊರಟುಹೋಗಬೇಕು. ತಪ್ಪಿದಲ್ಲಿ ಶಿಲೆಗಳಾಗುವಿರಿ" ಎಂದು ಶಪಿಸಿದನು ಮತಂಗಮುನಿ. ಅದರಿಂದಾಗಿ ವಾಲಿಯ ಕಡೆಯವರಿಗೂ ದೊಡ್ಡ ಭಯ ಹಿಡಿಯಿತು. ಅವರೆಲ್ಲರೂ ತಡಮಾಡದೆ ವಾಲಿಯ ಬಳಿಗೆ ಓಡಿಬಂದರು. ವಾಲಿ ಅವರನ್ನು



4

ನೋಡಿ, "ನೀವೆಲ್ಲಾ ಏಕೆ ಓಡಿಬಂದಿರಿ ? ಏನಾಯಿತು ? ನಮ್ಮ ವಾನರರಿಗೆ ಅಪಾಯವೇನೂ ಬರಲಿಲ್ಲ ವಷ್ಟೆ ?" ಎಂದು ಕೇಳಿದನು. ಅವರು ನಡೆದ ಎಲ್ಲಾ ಸಂಗತಿಯನ್ನೂ ಹೇಳಿದರು.

ಕೂಡಲೇ ವಾಲಿ ಮತಂಗ ಮಹಾಮುನಿಗೆ ತನ್ನ ಪಶ್ಚಾತ್ತಾಪವನ್ನು ತಿಳಿಸುತ್ತ, ಕೊಟ್ಟ ಶಾಪವನ್ನು ಹಿಂದಿರುಗಿಸುವಂತೆ ಬೇಡಿಕೊಂಡನು. ಆದರೆ ಮತಂಗ ಮುನಿ ಅವನ ಬೇಡಿಕೆಗಳನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ.

ಅಂದಿನಿಂದ ವಾಲಿ ಮತಂಗಾಶ್ರಮವೆನಿಸಿದ ಋಷ್ಯಮೂಕ ಪರ್ವತದ ಕಡೆಗೆ ನೋಡುವು ದನ್ನೂ ಬಿಟ್ಟನು. ಈಶಾಪವು ಸುಗ್ರೀವನಿಗೆ ವರವಾಗಿ ಪರಿಣಮಿಸಿತ್ತು. ಅವನು ತನ್ನ ಮಂತ್ರಿ ಗಳೊಂದಿಗೆ ಋಷ್ಯಮೂಕ ಪರ್ವತದಲ್ಲಿ ನಿರ್ಭಯ ದಿಂದಿರುವಂತಾಯಿತು.

ಈ ಸಮಾಚಾರವನ್ನೆಲ್ಲ ಸುಗ್ರೀವನು ರಾಮನಿಗೆ ಹೇಳಿ, ಒಣಗಿಹೋದ ದುಂದುಭಿಯ ಕಳೇಬರವನ್ನು ಕೂಡ ರಾಮನಿಗೆ ತೋರಿಸಿದನು. "ಅಲ್ಲಿ ನೋಡು ರಾಮಾ, ದಪ್ಪವಾದ ಏಳು ಸಾಲ ವೃಕ್ಷಗಳು ಇರುವು ವಷ್ಟೆ ? ಅವುಗಳಲ್ಲಿ ಯಾವುದಾದರೊಂದು ಮರ ದೊಳಗೆ ಹೊಕ್ಕು ಹೊರಗೆ ಬರುವ ಹಾಗೆ ಬಾಣ ಪ್ರಯೋಗ ಮಾಡುವಷ್ಟು ಶಕ್ತಿ ವಾಲಿಗಿದೆ. ಅಂತಹ ಬಲಶಾಲಿಯನ್ನು ಯುದ್ಧದಲ್ಲಿ ಯಾವ ವಿಧವಾಗಿ ಕೊಲ್ಲುವಿಯೋ ? ನೀನು ತುಂಬ ಯೋಚಿಸಿ ಈ ಕಾರ್ಯಕ್ಕೆ ಸಿದ್ಧನಾಗಬೇಕು" ಎಂದನು.

ಈ ಮಾತು ಕೇಳಿ ಲಕ್ಷ್ಮಣನು ನಕ್ಕು, "ಇವನು ಏನು ಮಾಡಿದರೆ ವಾಲಿಯನ್ನು ಕೊಲ್ಲಬಲ್ಲನೆಂಬ ನಂಬುಗೆ ನಿನಗೆ ಉಂಟಾಗುತ್ತದೆ ? ಅದನ್ನು ಹೇಳಿ ಬಿಡು" ಎಂದು ಕೇಳಿದ.

"ರಾಮನು ಕೂಡಾ ಸಾಲವೃಕ್ಷದೊಳಗೆ ತೂರಿ ಹೋಗುವಂತೆ ಬಾಣ ಹೊಡೆದು, ದುಂದುಭಿಯ ಈ



ಕಳೇಬರವನ್ನು ಇನ್ನೂರು ಮಾರುದೂರ ಹೋಗಿ ಬೀಳುವಂತೆ ಎಸೆಯಬಲ್ಲನಾದರೆ, ಇವನು ವಾಲಿ ಯನ್ನು ಕೊಲ್ಲುವುದು ನಿಜವೆಂದು ನಂಬುತ್ತೇನೆ" ಎಂದು ಸುಗ್ರೀವನು ಲಕ್ಷ್ಮಣನೊಂದಿಗೆ ಹೇಳಿದನು.

ಆ ಮೇಲೆ ಸುಗ್ರೀವನು ರಾಮನ ಕಡೆಗೆ ತಿರುಗಿ, "ರಾಮಾ, ವಾಲಿ ಮಹಾಬಲಶಾಲಿ. ಅವನು ಈವರೆಗೂ ಅಪಜಯವನ್ನು ಕಂಡವನಲ್ಲ. ಅವನ ಬಲವು ಎಷ್ಟೆಂಬುದು ನನಗೆ ಚೆನ್ನಾಗಿ ಗೊತ್ತು. ಆದುದರಿಂದ ನಾನು ತುಂಬ ಹೆದರುತ್ತೇನೆಯೇ ಹೊರತು, ನಿನ್ನನ್ನು ಹೆದರಿಸಲು ಈ ಮಾತು ಹೇಳುವುದಲ್ಲ" ಎಂದನು.

ರಾಮನು ಕಿರುನಗೆ ನಕ್ಕು, "ಒಳ್ಳೆಯದು ಸುಗ್ರೀವಾ, ನನ್ನ ಪರಾಕ್ರಮದಲ್ಲಿ ನಿನಗೆ ನಂಬುಗೆ ಹುಟ್ಟುವಂತೆ ಮಾಡುತ್ತೇನೆ" ಎಂದು ಹೇಳಿ, ದುಂದುಭಿಯ ಕಳೇಬರದ ಎಲುಬಿನ ಗೂಡನ್ನು ತನ್ನ ಕಾಲಿನ ಉಂಗುಷ್ಠದಿಂದ ಎತ್ತಿ ಒಗೆದನು.



4



ಅದು ಆಕಾಶದಲ್ಲಿ ಹತ್ತು ಹರದಾರಿ ದೂರ ಹಾರಿ ಹೋಗಿ ಬಿದ್ದುಬಿಟ್ಟಿತು.

ಅದನ್ನು ನೋಡಿ ಸುಗ್ರೀವನು, "ರಾಮಾ, ಈಗ ಆ ಕಳೇಬರವು ಒಣಗಿ ಹಗುರಾಗಿ ಹೋಯಿತು. ದುಂದುಭಿಯೊಂದಿಗೆ ಭಯಂಕರವಾಗಿ ಯುದ್ಧಮಾಡಿ ಆಯಾಸಗೊಂಡಿದ್ದ ಸಮಯದಲ್ಲಿಯೇ ವಾಲಿ ಹಸೀ ಕಳೇಬರವನ್ನು ಇಷ್ಟು ದೂರ ಬೀಸಿ ಒಗೆದಿದ್ದಾನೆ. ಆದುದರಿಂದ ನಿನಗೂ ವಾಲಿಗೂ ಬಲದಲ್ಲಿರುವ ವ್ಯತ್ಯಾಸವನ್ನು ಕುರಿತು ನನಗಿರುವ ಸಂದೇಹವು ತೀರಲಿಲ್ಲ. ಒಂದು ಸಾಲವೃಕ್ಷದಲ್ಲಿ ತೂರಿ ಹೋಗುವಂತೆ ಬಾಣ ಪ್ರಯೋಗ ಮಾಡುವೆಯಾದರೆ ನನಗಿರುವ ಸಂದೇಹವು ನಿಶ್ಶೇಷವಾಗಿ ತೀರಿ ಹೋಗುತ್ತದೆ" ಎಂದನು.

ಸುಗ್ರೀವನಿಗೆ ತನ್ನ ಮೇಲೆ ನಂಬುಗೆ ಯುಂಟಾಗಲಿಕ್ಕಾಗಿ ರಾಮನು ಧನುಸ್ಸನ್ನೆತ್ತಿ ಹಿಡಿದು, ಒಂದು ಬಾಣವನ್ನು ಸಾಲವೃಕ್ಷದ ಕಡೆಗೆ ಪ್ರಯೋಗಿಸಿದನು.

ಆ ಬಾಣ ಒಂದರ ಹಿಂದೊಂದರಂತೆ ಏಳು ಸಾಲ ವೃಕ್ಷದೊಳಗಿನಿಂದ ತೂರಿ ಹೋಗಿ ಬೆಟ್ಟವನ್ನು ಭೇದಿಸಿ ಭೂಮಿಯೊಳಗೆ ಹೊಕ್ಕಿತು. ರಾಮಬಾಣದ ಮಹತ್ವವನ್ನು ನೋಡಿ ಸುಗ್ರೀವನು ಬೆರಗಾಗಿ ಮಾತುಬಾರದೆ ಸಂಭೀಭೂತನಾದನು. ಹಾಗೆಯೇ ಕೈಜೋಡಿಸಿ ರಾಮನ ಮುಂದೆ ಸಾಷ್ಟಾಂಗ ನಮಸ್ಕಾರ ಮಾಡಿ, "ರಾಮಾ, ನೀನು ಸಾಮಾನ್ಯನಲ್ಲ. ಇಂದ್ರನನ್ನೂ ದೇವತೆಗಳನ್ನು ಕೂಡಾ ಜಯಿಸಿ ಬಿಡುವವನು. ವಾಲಿ ನಿನಗೆ ತೃಣಸಮಾನನು. ನಿನ್ನ ಸ್ನೇಹವು ದೊರೆತುದು ನನ್ನ ಭಾಗ್ಯ! ನಿನ್ನನ್ನು ಪರೀಕ್ಷಿಸಿದುದಕ್ಕಾಗಿ ಕ್ಷಮಿಸು" ಎಂದನು.

ರಾಮನು ಸುಗ್ರೀವನನ್ನು ಆಲಿಂಗಿಸಿಕೊಂಡು, ಲಕ್ಷ್ಮಣನೊಡನೆ ಸಂಪ್ರದಿಸಿ, "ಸುಗ್ರೀವಾ, ನಾವು ಹೊರಟು ಕಿಷ್ಕಿಂಧೆಗೆ ಹೋಗೋಣ. ನೀನು ನಮಗಿಂತ ಮುಂದಾಗಿ ಹೋಗಿ ವಾಲಿಯನ್ನು ಯುದ್ಧಕ್ಕೆ ಕರೆ. ನಿನ್ನ ಕಾರ್ಯ ಪರಾಕ್ರಮಗಳೂ ಚೆನ್ನಾಗಿ ಪ್ರದರ್ಶನವಾಗಲಿ" ಎಂದನು.

ಆ ಕೂಡಲೇ ರಾಮಲಕ್ಷ್ಮಣರೂ, ಸುಗ್ರೀವ ಅನುಚರರೂ ಕಿಷ್ಕಿಂಧೆಗೆ ಹೋಗಿ, ನಗರದ ಹೊರಗಣ ವನ ವೃಕ್ಷಗಳ ಮರೆಯಲ್ಲಿ ಅಡಗಿಕೊಂಡರು.

ಸುಗ್ರೀವನು ಮುಂದೆ ಹೋಗಿ ದಟ್ಟಿ ಬಿಗಿದು ಭುಜಾಸ್ಫಾಲನೆ ಮಾಡುತ್ತ ವಾಲಿಯ ಕಿವಿಗೆ ಕೇಳಿಸುವಂತೆ ದೊಡ್ಡ ಸ್ವರದಿಂದ ಭಯಂಕರವಾಗಿ ಗರ್ಜನೆ ಮಾಡಿದನು. ತನ್ನ ತಮ್ಮನ ಸ್ವರದ ಗುರುತು ಹಿಡಿದ ವಾಲಿಗೆ ಬಹಳ ಸಿಟ್ಟುಬಂದಿತು. ಅವನು ಸುಗ್ರೀವ ಬಳಿಗೆ ಓಡಿಬಂದನು. ಅಣ್ಣ ತಮ್ಮಂದಿರಿಬ್ಬರು ದಾರುಣವಾಗಿ ಯುದ್ಧ ಮಾಡಿದರು. ಒ ರನ್ನೊಬ್ಬರು ಮುಷ್ಟಿಯಿಂದಲೂ, ಅಂಗೈಯಿಂದಲೂ ಹೊಡೆದುಕೊಂಡರು. ಹಿಡಿದು ಬಡಿದಾಡಿಕೊಂಡರು.

ಅವರಿಬ್ಬರೂ ಒಂದೇ ಹೋಲಿಕೆಯುಲ್ಲಿರುವುದ ನೋಡಿ, ರಾಮನಿಗೆ ಅವರೊಳಗೆ ಯಾರು ಸುಗ್ರೀ



4

ಯಾರು ವಾಲಿ ಎಂಬುದು ತಿಳಿಯದಾಯಿತು. ಆದುದರಿಂದ ಅವನು ಬಾಣ ಪ್ರಯೋಗ ಮಾಡಲಾರದೆ ಹೋದನು. ಇಷ್ಟರೊಳಗೆ ಸುಗ್ರೀವನು ಸೋತು ಓಡಿಹೋಗ ತೊಡಗಿದನು.

ವಾಲಿ ಅವನನ್ನು ಸ್ವಲ್ಪ ದೂರದವರೆಗೆ ಓಡಿಸಿಕೊಂಡು ಹೋಗಿ. ಮತಂಗ ಮುನಿಯ ಶಾಪವು ನೆನಪಿಗೆ ಬರುತ್ತಲೇ " ಬದುಕಿ ಉಳಿದೆ ಹೋಗೆಲಾ !" ಎಂದು ಜರೆದು ಕಿಷ್ಕಿಂಧೆಗೆ ಹಿಂದಿರುಗಿದನು.

ರಾಮನು ಹನುಮಂತನನ್ನೂ ಲಕ್ಷ್ಮಣನನ್ನೂ ಕರೆದುಕೊಂಡು ಸುಗ್ರೀವನ ಹಿಂದೆಯೇ ಹೋದನು. ಸೋತು ಸುಣ್ಣಾಗಿ ಹೋದ ಸುಗ್ರೀವನು ರಾಮನನ್ನು ನೋಡಿ, ನಾಚಿಕೆಯಿಂದ ತಲೆ ಬಗ್ಗಿಸಿಕೊಂಡು, " ನಿನ್ನ ಪರಾಕ್ರಮವನ್ನೆಲ್ಲಾ ನನಗೆ ತೋರಿಸಿ. ನನ್ನನ್ನು ವಾಲಿಯ ಮೇಲೆ ಯುದ್ಧಕ್ಕೆ ಕಳುಹಿಸಿ. ಅವನ ಕೈಯಿಂದ ಸಾಯುವ ಹಾಗೆ ಹೊಡೆತ ಬೀಳಿಸಿದೆಯಲ್ಲಾ ? ವಾಲಿಯನ್ನು ಕೊಲ್ಲಲು ಸಾಧ್ಯವಿಲ್ಲವೆಂದು ಮೊದಲೇ ಹೇಳಿದ್ದರೆ ನಾನು ಸುಮ್ಮನಿರುತ್ತಿದ್ದೆನಲ್ಲ ? ಏನು ನಿನ್ನ ಉದ್ದೇಶವೋ ತಿಳಿದಿಲ್ಲ. ವಾಲಿ ಕಣ್ಣಿಗೆ ಬಿದ್ದ ಮರುಕ್ಷಣದಲ್ಲಿ ಸಾಯುವನೆಂದೆಯಲ್ಲಾ ?" ಎಂದು ದೀನನಾಗಿ ಹೇಳಿದನು.

" ಸುಗ್ರೀವಾ, ನಾನು ವಾಲಿಯನ್ನು ಹೊಡೆಯದೇ ಹೋಗಲು ಕಾರಣ ಹೇಳುತ್ತೇನೆ ಕೇಳು. ನಿಮ್ಮಿಬ್ಬರ ರೂಪಾಲಂಕಾರ, ಅಂಗವಿನ್ಯಾಸಗಳು, ನಡಿಗೆಯ ರೀತಿಗಳೆಲ್ಲಾ ಒಂದೇ ರೀತಿಯಾಗಿವೆ. ಕಂಠಧ್ವನಿಯೂ, ಕಣ್ಣುಗಳೂ, ಶರೀರಛಾಯೆಯೂ ಒಂದೇ ವಿಧವಾಗಿವೆ. ನಿಮ್ಮಿಬ್ಬರೊಳಗೆ ನನಗೆ ಸ್ವಲ್ಪ ಕೂಡಾ ವ್ಯತ್ಯಾಸ ಕಾಣಲಿಲ್ಲ. ನೀನು ಸೋತು ಓಡಿದಾಗ ಯಾರು ವಾಲಿಯೆಂದು ಗೊತ್ತಾದರೂ ವೇಳೆಮೀರಿ ಅವನೂ ಓಡಿದ. ಈ ಪರಿಸ್ಥಿತಿಯಲ್ಲಿ ಮೂಲಕ್ಕೇ ಮೋಸ ಬರಬಾರದೆಂದು ನಾನು ಬಾಣ ಪ್ರಯೋಗ ಮಾಡಲಿಲ್ಲ. ನಿನಗೆ ಅಭಯ ವಿತ್ತವನು ನಿನ್ನ ಪ್ರಾಣವನ್ನೇ ತೆಗೆದುಬಿಟ್ಟರೆ ಮಹಾಪಾಪವಾಗುವುದಷ್ಟೆ ? ನಾನೂ ಲಕ್ಷ್ಮಣನೂ ಸೀತೆ ಕೂಡಾ ನಿನ್ನ ಅಧೀನದಲ್ಲಿರುವವರು. ನನ್ನನ್ನು ಕುರಿತು ಸಂದೇಹ ಪಡಬೇಡ. ನೀನು ಇನ್ನೊಮ್ಮೆ ಹೋಗಿ ವಾಲಿಯೊಂದಿಗೆ ಯುದ್ಧ ಮಾಡು. ಈಸಾರಿ ನನಗೆ ಸ್ಪಷ್ಟ ಗುರುತು ತಿಳಿಯುವಂತೆ ಏನಾದರೂ ಧರಿಸು. ಒಂದೇ ಒಂದು ಬಾಣದಿಂದ ವಾಲಿಯನ್ನು ಕೊಲ್ಲುತ್ತೇನೆ. ಲಕ್ಷ್ಮಣಾ, ಪುಷ್ಪಿತವಾಗಿರುವ ಆ ಗಜಪುಷ್ಪಿಲತೆಯನ್ನು ತಂದು ಸುಗ್ರೀವನ ಕೊರಳಿಗೆ ಸುತ್ತು," ಎಂದನು.

ರಾಮನ ಮಾತಿನಲ್ಲಿರುವ ಯಥಾರ್ಥತೆಯನ್ನು ಸುಗ್ರೀವನು ತಿಳಿದನು ; ನಂಬುಗೆಗೊಂಡನು. ಅವನು ಗಜಪುಷ್ಪಿಲತೆಯನ್ನು ಕೊರಳಿಗೆಸುತ್ತಿಕೊಂಡು, ಮತ್ತೆ ಕಿಷ್ಕಿಂಧೆಗೆ ಹೊರಟ ಹೊಸ ಉತ್ಸಾಹದಿಂದ.

